# ಅಷ್ಟಮಹಾಮಂತ್ರಗಳು

(ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸ ಸಹಿತ)

ಲೇಖಕರು :
ಪಿ. ವಿಷ್ಣುತೀರ್ಥ

ಪ್ರಕಾಶಕರು :
ಶ್ರೀ ಮಂತ್ರಾಲಯ ಪಾದಯಾತ್ರಾ ಸಂಘ
ಲಕ್ಷ್ಮೇಶ್ವರ – 582116

ಶ್ರೀ ರಾಮದೂತಾಯ ನಮಃ

# ಅಷ್ಟಮಹಾಮಂತ್ರಗಳು

## ಗುರುಮಂತ್ರ, ತತ್ತ್ವನ್ಯಾಸ, ಮಾತೃಕಾನ್ಯಾಸ ಸಹಿತ

ಲೇಖಕರು :

ಶ್ರೀ ಪಿ. ವಿಷ್ಣುತೀರ್ಥ

ಆನೆಗೊಂದಿ

ಪ್ರಕಾಶಕರು :

ಶ್ರೀ ಮಂತ್ರಾಲಯ ಪಾದಯಾತ್ರಾ ಸಂಘ

ಲಕ್ಷ್ಮೇಶ್ವರ - 582 116

ASHTAMAHA MANTHRAGALU - WRITTEN BY
**P.Vishnutheertha,**
931, 2nd Main Road, 4th Block, Rajajinagar, Bangalore-560 010.
and Published by **Dr. Babu Rao Kulkarni,** Sri Mantralaya Padayathra Sangha, Lakshmeshwar-582 116.

1st Edition : 1994, 1,000 Copies
No. of Pages XVI +148



ಬೆಲೆ : ರೂ. **30-00**

ಮುದ್ರಣ :
**ಆರ್.ಕೆ. ಎಂಟರ್‌ಪ್ರೈಸಸ್**
೨ನೇ ಮುಖ್ಯರಸ್ತೆ, ನಾಲ್ಕನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು ೫೬೦ ೦೧೦.

# -: ಅರ್ಪಣೆ :-

|| ಶ್ರೀಮನ್ಮೂಲರಾಮೋ ವಿಜಯತೇ ||



ಶ್ರೀಮತ್ಪರಮಹಂಸ ಪೂಜ್ಯ ಇತ್ಯಾದಿ ಬಿರುದಾಂಕಿತರೂ ಪ್ರಾತಃಸ್ಮರಣೀಯರೂ ವಿದ್ಯಾಪಕ್ಷಪಾತಿಗಳೂ ಮಂತ್ರಾಲಯ ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಗೆ ಕಾರಣೀಭೂತರೂ, ಶ್ರೀ ಗುರುರಾಜರ ಆಂತರಿಕ ಭಕ್ತರೂ, ಲಕ್ಷ್ಮೇಶ್ವರದ ಮಂತ್ರಾಲಯ ಪ್ರಾದಯಾತ್ರಾ ಸಂಘಕ್ಕೆ ಚಿರಂತನ ಸ್ಫೂರ್ತಿಯ ಸೆಲೆಯಾಗಿರುವವರೂ ಆದ ಶ್ರೀ ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ 'ಅಷ್ಟ ಮಹಾಮಂತ್ರ' ಎಂಬ ಕೃತಿಯು ಭಕ್ತಿಯಿಂದ ಸಮರ್ಪಿಸಲ್ಪಟ್ಟಿದೆ.

ಮಂತ್ರಾಲಯ ಪಾದಯಾತ್ರಾ ಸಂಘ, ಲಕ್ಷ್ಮೇಶ್ವರ ಹಾಗೂ ಶಾಖಾ ಧಾರಾವಾಡದ ಸಮಸ್ತ ಪಾದಯಾತ್ರಿಕರು.

# ಅನುಗ್ರಹ ವಚನಗಳು

## ಶ್ರೀ ರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರಂಗತ ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯೇತ್ಯಾದಿ ಬಿರುದಾಂಕಿತರಾದ, ಶ್ರೀಮನ್ಮೂಲರಘುಪತಿ ವೇದವ್ಯಾಸ ದಿವ್ಯ ಶ್ರೀಪಾದಪದ್ಮಾರಾಧಕರಾದ, ಮಂತ್ರಾಲಯ ಶ್ರೀ ರಾಘವೇಂದ್ರಮಠಾಧೀಶರಾದ ಪ್ರಾತಃಸ್ಮರಣೀಯ ಶ್ರೀಮತ್ಸುಜಯೀಂದ್ರತೀರ್ಥರ ವರಕುಮಾರಕರಾದ ಶ್ರೀ ೧೦೦೮ ಶ್ರೀಮತ್ಸುಶಮೀಂದ್ರತೀರ್ಥ ಶ್ರೀ ಶ್ರೀಪಾದಂಗಳವರು,

ಪರಮಪ್ರಿಯ ಶಿಷ್ಯರಾದ ಶ್ರೀ ಲಕ್ಷ್ಮೀಶ್ವರ ಪಾದಯಾತ್ರಿಗಳಿಗೆ ಮಾಡುವ ನಾರಾಯಣ ಸ್ಮರಣೆಗಳು.

ನೀವೆಲ್ಲರೂ ಮೂರು ನಾಲ್ಕು ದಶಕಗಳಿಂದ ಶ್ರೀ ಮಂತ್ರಾಲಯಕ್ಕೆ ಅತ್ಯಂತ ಭಕ್ತಿಯಿಂದ ಪಾದಯಾತ್ರೆಯನ್ನು ಮಾಡುತ್ತಾ ಆಗಮಿಸಿ, ಶ್ರೀ ಗುರುಸಾರ್ವಭೌಮರಿಗೆ ಸರ್ವವಿಧವಾದ ಸೇವೆಯನ್ನು ಮಾಡಿ, ಶ್ರೀ ಶ್ರೀ ಗುರುರಾಜರ ಅನುಗ್ರಹಕ್ಕೆ ಪಾತ್ರರಾಗಿ ಧನ್ಯರಾಗಿರುವಿರಿ.

ಪ್ರಕೃತ, ನೀವು ಸಕಲ ಆಸ್ತಿಕರಿಗೆ ಅತ್ಯಂತ ಉಪಯುಕ್ತವಾದ "ಶ್ರೀ ಅಷ್ಟಮಹಾಮಂತ್ರಗಳು" ಎಂಬ ಗ್ರಂಥವನ್ನು ಪ್ರಕಟಿಸುತ್ತಿರುವುದು, ನಮಗೆ ಅತ್ಯಂತ ಸಂತೋಷಾಸ್ಪದವಾದ ವಿಷಯವು. ಈ ಗ್ರಂಥವನ್ನು ಆಸ್ತಿಕರೆಲ್ಲರೂ ಪಡೆದು ಪಾರಾಯಣಾದಿಗಳನ್ನು ಮಾಡಿ, ಶ್ರೀ ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಆಶೀರ್ವದಿಸುತ್ತೇವೆ.

ಇಂತಹ ಅನೇಕ ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಲಿರುವ ನಿಮಗೆ ಶ್ರೀ ಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಗತ ಭಾರತೀಶಾಂತರ್ಗತ ಅಸ್ಮದುಪಾಸ್ಯ ಶ್ರೀ ಶ್ರೀವೇದವ್ಯಾಸಾಭಿನ್ನ ಶ್ರೀ ಬ್ರಹ್ಮಕರಾರ್ಚಿತ ಮೂಲರಾಮದೇವರು, ಸಕಲ ಸೌಕರ್ಯಗಳನ್ನು ಕಲ್ಪಿಸಲಿ. ನಿಮ್ಮೆಲ್ಲರನ್ನೂ ಅನುಗ್ರಹಿಸಲಿ.

ಇತಿ ನಾರಾಯಣ ಸ್ಮರಣೆಗಳು

ಮಂತ್ರಾಲಯ
ಶ್ರೀ ಭಾವ ಸಂ॥ ದ ಆಷಾಢ ಶುಕ್ಲ ನವಮೀ
ರವಿವಾರ
ದಿನಾಂಕ: 17-07-1994

|| ಶ್ರೀ ವ್ಯಾಸರಾಜೋ ವಿಜಯತೇ ||

### ಶ್ರೀಮನ್ಮಧ್ವಾಚಾರ್ಯರ ಮೂಲ ಸಂಸ್ಥಾನ

## ಶ್ರೀ ರಾಜೇಂದ್ರತೀರ್ಥರ ಪೂರ್ವಾದಿ ಮಠ--ಶ್ರೀ ವ್ಯಾಸರಾಜ ಮಠ

ನಮಗೆ ಪರಮಪ್ರಿಯ ಶಿಷ್ಯರಾದ ಅವಧೂತ ಶಿರೋಮಣಿ -- ವಿಷ್ಣುತೀರ್ಥರವರಿಗೆ, ಪ್ರಕೃತ ನೀವು ಅಷ್ಟಮಹಾಮಂತ್ರಗಳ ಅರ್ಥ-ವಿವರಣೆ, ಪ್ರಭೇದಗಳು, ಹಲವಾರು ನ್ಯಾಸಗಳು ಇವುಗಳ ಬಗ್ಗೆ ಅರ್ಥವತ್ತಾಗಿ ವಿವರಣೆ ನೀಡಿ ಪುಸ್ತಕವನ್ನು ಹೊರತರುತ್ತಿರುವುದು ಸೂಕ್ತವಾದ ವಿಷಯ. ನಿಮ್ಮ ಪುಸ್ತಕವು ಈ ಬಗ್ಗೆ ಅಧ್ಯಯನ ನಡೆಸುವವರಿಗೆ ಒಳ್ಳೆಯ ಕೈಪಿಡಿಯಾಗಬಲ್ಲದು. ಇಂತಹ ಸಾರ್ಥಕ ಕೆಲಸಕ್ಕಾಗಿ ನೀವೂ, ಇದರ ಪ್ರಕಾಶಕರೂ, ಮುದ್ರಕರೂ ಅಭಿನಂದನೀಯರು. ಶ್ರೀಹರಿವಾಯುಗಳು ನಿಮ್ಮ ಶ್ರಮವನ್ನು ಸಾರ್ಥಕಗೊಳಿಸಲಿ ಎಂದು ಹಾರೈಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

ದಿನಾಂಕ : 22-5-1994
ಮೊಕ್ಕಾಂ, ಬೆಂಗಳೂರು.

# ಶ್ರೀ ಶ್ರೀಪಾದರಾಜ ಮಠ
## ಮುಳಬಾಗಿಲು

**॥ ಓಂ ॥**

**ಶ್ರೀ ಗುರುಭ್ಯೋ ನಮಃ**

ಸಾಧನಜೀವಿಗಳು ತಮ್ಮ ನಿತ್ಯ ಅನುಷ್ಠಾನಕ್ಕೆ ಉಪಯುಕ್ತವಾಗುವಂತೆ ಆಚರಿಸಬೇಕಾದ ಕರ್ಮಗಳಲ್ಲೊಂದು ಹಾಗೂ ಮುಖ್ಯವಾದದ್ದು "ಅಷ್ಟಮಹಾಮಂತ್ರ ಜಪ." ಈ ಮಂತ್ರವನ್ನು ನಿತ್ಯವೂ ತಮ್ಮ ಸಂಧ್ಯಾವಂದನಾನಂತರ ಅರ್ಥಪುರಸ್ಸರವಾಗಿಯೂ ಕ್ರಮವಾಗಿಯೂ ಆಚರಿಸಿದಲ್ಲಿ ಸದ್ಗತಿಯನ್ನು ಹೊಂದುವುದು ನಿಸ್ಸಂದೇಹ. ಆದರೆ ಈ ಕರ್ಮಾಚರಣೆಯು ಪರಂಪರವಾಗಿ ಬಂದು ಕಾಲಕ್ರಮದಲ್ಲಿ ಅದರ ಆಚರಣೆಯು ಬಹಳಷ್ಟು ವಿರಳವಾಗಿರುವುದು ಎಲ್ಲರ ಅನುಭವ. ಸಾಧಕರಿಗೆ ಇದರ ಕೊರತೆಯನ್ನು ನಿವಾರಣೆ ಮಾಡಲು ವಿಷ್ಣುತೀರ್ಥರು ಈಗಾಗಲೇ ಅನೇಕ ಉಪಯುಕ್ತ ಗ್ರಂಥಗಳು ಹಾಗೂ ಸಣ್ಣ ಸಣ್ಣ, ಅನುಷ್ಠಾನಕ್ಕೆ ಯೋಗ್ಯವಾದ ಪುಸ್ತಕಗಳನ್ನು ಬರೆದಿರುವರಲ್ಲದೆ, ಈ ತಮ್ಮ ಇಳಿವಯಸ್ಸಿನಲ್ಲಿ ಅಷ್ಟಮಹಾಮಂತ್ರಗಳ ಪೂರ್ವಕ ಸಾಧಕರುಗಳು ತಮ್ಮ ನಿತ್ಯಕರ್ಮವನ್ನು ಪೂರ್ಣಗೊಳಿಸಲು ಅನುಕೂಲವಾಗಲು ಇದ್ದ ಕೊರತೆಯನ್ನು ನೀಗಿಸುವ ಸಲುವಾಗಿ ಈ ಅಷ್ಟಮಹಾಮಂತ್ರಗಳನ್ನು ಯಾವ ರೀತಿ ಆಚರಿಸಬೇಕು ಮತ್ತು ಅದರ ಮಹತ್ವವೇನು ಎಂತ ತಿಳಿಸುವ ಪುಸ್ತಕವನ್ನು ಬರೆದಿದ್ದಾರೆ. ಅಷ್ಟಮಹಾಮಂತ್ರಗಳನ್ನು ನಿಷ್ಠೆಯಿಂದ, ನಿತ್ಯದಲ್ಲೂ ಕ್ರಮಬದ್ಧವಾಗಿ ಆಚರಿಸಿದ್ದೇ ಆದರೆ ಶೀಘ್ರದಲ್ಲೇ ಭಗವತ್ಪ್ರಸಾದವು ಲಭಿಸುವುದು ನಿಶ್ಚಿತ. ಕಾರಣ ಭಗವಂತನನ್ನು ಆರಾಧಿಸುವ ಮಂತ್ರಗಳು ಅನೇಕ. ಆ ಎಲ್ಲ ಮಂತ್ರಗಳಲ್ಲೂ ವಿಶೇಷವಾಗಿ ಭಗವತ್ ಸಾನ್ನಿಧ್ಯದಿಂದ ಯುಕ್ತವಾದ ವಿಷಯವನ್ನು ಅಷ್ಟಮಹಾಮಂತ್ರಗಳಲ್ಲಿ ಅಡಕಮಾಡಿ ಕಲಿಯುಗದ ಅಲ್ಪಶಕ್ತಿ ಅಲ್ಪಾಯುಸ್ಸುಳ್ಳ ಜೀವರುಗಳ ಉದ್ಧಾರಕ್ಕಾಗಿಯೇ ಶ್ರೀ ಮಧ್ವಾಚಾರ್ಯರು ತಿಳಿಸಿರುತ್ತಾರೆ. ಈ ಗ್ರಂಥಕರ್ತರು ಮಾಡಿರುವ ಈ ಉಪಕಾರವು ಸಾರ್ಥಕವಾಗಬೇಕಾದಲ್ಲಿ ಎಲ್ಲ ಸುಜೀವಿಗಳೂ ಈ ಮಂತ್ರಗಳನ್ನು ತಮ್ಮ ನಿತ್ಯ ಅನುಷ್ಠಾನದಲ್ಲಿಟ್ಟುಕೊಂಡು ಭಗವತ್ಕೃಪೆಗೆ ಪಾತ್ರರಾದಲ್ಲಿ ಗ್ರಂಥಕರ್ತರ ಶ್ರಮವು ಸಾರ್ಥಕವಾಗುತ್ತೆ ಎಂತ ತಿಳಿಸುತ್ತಾ ಈ ಗ್ರಂಥಪ್ರತಿಪಾದ್ಯ ನಾರಾಯಣಾಭಿನ್ನ ವಿಷ್ಣುವು ವಿಷ್ಣುತೀರ್ಥರಿಗೆ ಸನ್ಮಂಗಳವನ್ನುಂಟುಮಾಡಲೆಂತ ನಮ್ಮ ಆರಾಧ್ಯಮೂರ್ತಿ ಶ್ರೀ ಶ್ರೀ ಹಯವದನರಂಗವಿಠಲಾತ್ಮಕ ಶ್ರೀ ಶ್ರೀ ಗೋಪೀನಾಥದೇವರಲ್ಲಿ ಪ್ರಾರ್ಥಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

ಬೆಂಗಳೂರು ಮೊಕ್ಕಾಂ — ಶ್ರೀ ಶ್ರೀ ವಿಜ್ಞಾನನಿಧಿತೀರ್ಥ

ದಿನಾಂಕ : 20-7-1994

## ಶ್ರೀ ವಿಶ್ವೇಶತೀರ್ಥ ಸ್ವಾಮಿಗಳು, ಶ್ರೀ ಪೇಜಾವರ ಅಧೋಕ್ಷಜ ಮಠ, ಜಗದ್ಗುರು ಮಧ್ವಾಚಾರ್ಯ ಸಂಸ್ಥಾನ, ಉಡುಪಿ

ನಮ್ಮ ದೈನಂದಿನ ಜಪಾನುಷ್ಠಾನಗಳಲ್ಲಿ ಅಷ್ಟಮಹಾ ಮಂತ್ರಗಳಿಗೆ ಅತ್ಯಂತ ಮಹತ್ವದ ಸ್ಥಾನವಿದೆ. ಇವು ಎಲ್ಲಾ ಮಂತ್ರಗಳಿಗೆ ಮೂಲಮಂತ್ರಗಳಾಗಿವೆ. ಈ ಮಂತ್ರಗಳ ಅರ್ಥವನ್ನು ತಿಳಿದರೆ ಸಕಲ ಮಂತ್ರಗಳ ಅರ್ಥಜ್ಞಾನವನ್ನು ಪಡೆದಂತಾಗುವುದು. ಈ ಅಷ್ಟ ಮಹಾಮಂತ್ರಗಳನ್ನು ಜಪಿಸಿದವನಿಗೆ ಎಲ್ಲ ಮಂತ್ರಗಳ ಜಪದ ಫಲವು ದೊರೆಯುತ್ತದೆ ಎಂಬುದಾಗಿ ಈ ಮಹಾಮಂತ್ರಗಳನ್ನು ವಿಶೇಷವಾಗಿ ವರ್ಣಿಸಿದ್ದಾರೆ. ಭಗವಂತನ ವಿವಿಧ ರೂಪಗಳನ್ನು ಪ್ರತಿಪಾದಿಸುವ ಈ ಮಹಾಮಂತ್ರಗಳು ನಮ್ಮ ಆಧ್ಯಾತ್ಮಿಕ ಉನ್ನತಿಗೆ ಅತ್ಯಂತ ಅವಶ್ಯಕವಾಗಿವೆ. ತಂತ್ರಸಾರ ಸಂಗ್ರಹದ ಮೂರನೇ ಅಧ್ಯಾಯದಲ್ಲಿ ಈ ಮಂತ್ರಗಳ ಅರ್ಥವಿವರಣೆಯನ್ನು ಶ್ರೀಮಧ್ವಾಚಾರ್ಯರು ವಿಸ್ತಾರವಾಗಿ ಮಾಡಿದ್ದಾರೆ. ಈ ಮಹಾಮಂತ್ರಗಳ ಜಪವಿಧಾನವನ್ನು ಸರಳ ಕನ್ನಡ ಭಾಷೆಯಲ್ಲಿ ವಿವರಿಸುವ ಈ ಕೃತಿಯು ಸಾಮಾನ್ಯ ಸಾಧಕ ಸಮುದಾಯಕ್ಕೆ ಅತ್ಯಂತ ಉಪಕಾರಕವಾಗಿದೆ. ನವವೃಂದಾವನದಲ್ಲಿ ಏಕಾಕಿಯಾಗಿ ಬಹುಕಾಲ ಸಾಧನೆಯನ್ನು ನಡೆಸಿ ವಿಶೇಷ ಗುರುದೇವತಾನುಗ್ರಹಕ್ಕೆ ಪಾತ್ರರಾದ ಶ್ರೀ ವಿಷ್ಣುತೀರ್ಥರು ಇಂತಹ ಕೃತಿಗಳ ಮೂಲಕ ಜ್ಞಾನಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದನ್ನು ನೋಡಿ ನಮಗೆ ಸಂತೋಷವಾಗಿದೆ. ಆಂತಹ ಜ್ಞಾನಸೇವೆಯು ಅವರಿಂದ ಇನ್ನೂ ನಡೆಯುತ್ತಿರಲೆಂದು ಆಶಿಸುತ್ತೇವೆ.

**ನಾರಾಯಣ ಸ್ಮರಣೆಗಳು**

ಭಾವಸಂವತ್ಸರದ

ಕಾರ್ತಿಕ ಶುದ್ಧ ಬಲಿಪಾಡ್ಯಮಿ.

ತಾ. 4-11-1994

# ಮುನ್ನುಡಿ

'ತಂತ್ರಸಾರ' ಶ್ರೀ ಮಧ್ವಾಚಾರ್ಯರ ವಿಶಿಷ್ಟ ಕೃತಿ. ಅದರಲ್ಲೂ ಅದರಲ್ಲಿ ಬಂದಿರುವ ಮಂತ್ರಗಳ ವಿವರ ಅಸದೃಶ. ಕ್ಷತ್ರಿಯರಿಗೆ ಅಸ್ತ್ರಗಳು ಹೇಗೋ ಬ್ರಾಹ್ಮಣರಿಗೆ ಮಂತ್ರಗಳು ಹಾಗೆ. ಮಳೆ, ಬೆಳೆ, ಆರೋಗ್ಯ, ಆಯುಸ್ಸು, ಐಶ್ವರ್ಯ, ಶತ್ರುಜಯ, ರೋಗನಾಶ, ವಿಷಪರಿಹಾರ, ವಾದಿಜಯ, ಅಗ್ನಿಸ್ತಂಭನ, ಜಲಸ್ತಂಭನ, ಮೊದಲಾದ ಸಕಲಕಾರ್ಯಗಳನ್ನು ಮಂತ್ರಗಳಿಂದ ಸಾಧಿಸಿಕೊಳ್ಳಬಹುದು. ಆದರೆ ತತ್ವಜ್ಞಾನದ ಸಿದ್ಧಿಯೇ ಮಂತ್ರಗಳ ಸರ್ವೋಚ್ಚ ಪ್ರಯೋಜನ. ಸುಮಧ್ವ ವಿಜಯದಲ್ಲಿ (15/78) 'ತಂತ್ರಸಾರ'ವನ್ನು 'ಕಲ್ಪವೃಕ್ಷ'ವೆಂದೇ ವರ್ಣಿಸಲಾಗಿದೆ_

"ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ ಪರ್ಯಾಪ್ತವಾಂಛಿತಃ|
ಅಮರ್ತ್ಯೈರಾಶ್ರಿತಶ್ಛಾಯಂ ಕಲ್ಪದ್ರುಮಮಿವೋತ್ತಮಮ್|| "

ಇತರ ಕಾಮನೆಗಳನ್ನು ತೊರೆದು ಶ್ರೀಹರಿಪ್ರೀತಿಗೆಂದು ಜಪಿಸುವ ಮಂತ್ರ ಸಾಧಕನ ಸರ್ವೋನ್ನತಿಗೆ ಕಾರಣ. ಇಂತಹ ಮಂತ್ರಗಳನ್ನು ತೊರೆದವನು ಅತಂತ್ರನಾಗುತ್ತಾನೆ, ಕುತಂತ್ರಕ್ಕಿಳಿಯುತ್ತಾನೆ, ಸರ್ವವಿಧ ನಾಶಕ್ಕೂ ಒಳಗಾಗುತ್ತಾನೆ.

ವೈಷ್ಣವ ಮಂತ್ರಗಳ ಸಂಖ್ಯೆ ಒಟ್ಟು ಏಳುಕೋಟಿಯೆಂದು ಶ್ರೀ ರಾಘವೇಂದ್ರ ಸ್ವಾಮಿಗಳು "ಪ್ರಾತಃಸಂಕಲ್ಪ ಗದ್ಯ"ದಲ್ಲಿ ತಿಳಿಸಿರುವರು. ಕಲಿಯುಗದಲ್ಲಿ ಹೆಚ್ಚಿನ ಮಂತ್ರಗಳ ಶಕ್ತಿ ದುಷ್ಟವಿಷಯಗಳ ಮಟ್ಟಿಗೆ ಮುಚ್ಚಿಹೋಗಿರುತ್ತದೆ ಎಂದು ಶ್ರೀಮಧ್ವಾಚಾರ್ಯರು ತಿಳಿಸಿರುವರು. ಇಂತಹ ಕಲಿಯುಗದಲ್ಲೂ ಸರ್ವಸಿದ್ಧಿಕರವಾದ ಎಪ್ಪತ್ತೆರಡು ಮಹಾಮಂತ್ರಗಳನ್ನು ಅವರು ತಮ್ಮ "ತಂತ್ರಸಾರ ಸಂಗ್ರಹ"ದಲ್ಲಿ ತೋರಿಸಿರುವರು. ಅಷ್ಟಮಹಾಮಂತ್ರಗಳನ್ನು ಪ್ರಥಮಾಧ್ಯಾಯದಲ್ಲೂ ಉಳಿದವುಗಳನ್ನು ಮಂತ್ರಾಧ್ಯಾಯವೆಂದೇ ಹೆಸರಾದ ಚತುರ್ಥಾಧ್ಯಾಯದಲ್ಲೂ ತಿಳಿಸಿರುವರು.

ದೃಷ್ಟಾರ್ಥೆ ಏವ ಮಂತ್ರಾಣಾಂ ಕಲೌ ವೀರ್ಯಂ ತಿರಸ್ಕೃತಂ |
ತತ್ರಾಪ್ಯುದ್ದೀಪ್ತವೀರ್ಯಾ ಹಿ ಮಂತ್ರಾ ಅತ್ರಪ್ರಕೀರ್ತಿತಾಃ || (4/41)

ಅಷ್ಟಮಹಾಮಂತ್ರಗಳು ಉಳಿದೆಲ್ಲ ಮಂತ್ರಗಳಿಗೂ ಮೂಲಮಂತ್ರವೆನಿಸಿದೆ. ಪ್ರಣವ, ಮೂಲ(ನಾರಾಯಣಾಷ್ಟಾಕ್ಷರ), ವ್ಯಾಹೃತಿ, ವಾಸುದೇವದ್ವಾದಶಾಕ್ಷರ, ಬ್ರಹ್ಮಗಾಯತ್ರೀ, ಮಾತೃಕಾ, ಪುರುಷಸೂಕ್ತ, ವಿಷ್ಣುಷಡಕ್ಷರ-ಇವೇ ಅಷ್ಟಮಹಾಮಂತ್ರಗಳು. ಇವೆಲ್ಲ ಇತರ ಮಂತ್ರಗಳಿಗೂ ಮೂಲವಾಗಿದ್ದರೂ,

ನಾರಾಯಣಾಷ್ಟಾಕ್ಷರ ಮಂತ್ರ ಮಾತ್ರ ಮೂಲಮಂತ್ರವೆಂದೇ ಪ್ರಸಿದ್ಧವಾಗಿದೆ. ಇವುಗಳ ಜಪದಿಂದ ಸಮಸ್ತ ಮಂತ್ರಗಳನ್ನು ಜಪಿಸಿದ ಫಲ ಲಭಿಸುತ್ತದೆ; ವೇದಾದಿ ಸಕಲ ಸಚ್ಛಾಸ್ತ್ರಗಳ ಪರಿಜ್ಞಾನ ಸಿದ್ಧಿಸುತ್ತದೆ ಎಂಬುದಾಗಿ ಶ್ರೀಮದಾಚಾರ್ಯರು ತಿಳಿಸಿರುವರು-

"ಏತೇ ತು ಸರ್ವಮಂತ್ರಾಣಾಂ ಮೂಲಮಂತ್ರಾ ವಿಶೇಷತಃ|

ಏತದ್‌ಜ್ಞಾನಾತ್ ಸಮಸ್ತಂ ಚ ಜ್ಞಾತಂ ಸ್ಯಾಚ್ಛಬ್ದಗೋಚರಮ್|

ಏತಜ್ಜಪಾತ್ ಸಮಸ್ತಾನಾಂ ಮಂತ್ರಾಣಾಂ ಜಾಪಕೋ ಭವೇತ್|| "

ಮಂತ್ರಜಪವು ಸಾರ್ಥಕವಾಗಲು ಋಷಿ, ದೇವತೆ, ಛಂದಸ್ಸು, ನ್ಯಾಸ, ಧ್ಯಾನ -ಈ ಎಲ್ಲವೂ ಅತ್ಯವಶ್ಯಕ. ದೇವತಾಪರಿಜ್ಞಾನವಿಲ್ಲದೆ ಹೋದಲ್ಲಿ ಮೃತ್ಯು, ಛಂದೋಜ್ಞಾನವಿಲ್ಲದಾಗ ವೈಫಲ್ಯ, ನ್ಯಾಸರಹಿತವಾದರೆ ಆಯುಷ್ಯನಾಶ, ಧ್ಯಾನರಹಿತವಾದರೆ ನಿಷ್ಫಲತ್ವ ಎಂಬುದಾಗಿ ಶಾಸ್ತ್ರಗಳು ಸಾರಿವೆ. ಧ್ಯಾನಾದಿಗಳಿಂದ ಸಹಿತವಾದ ಮಂತ್ರಜಪ ತಾರಕವಾದರೆ ಅವುಗಳಿಂದ ರಹಿತವಾದಾಗ ಮಾರಕವಾಗುತ್ತದೆ. ಪ್ರತಿ ಮಂತ್ರಕ್ಕೂ ಅವೆಲ್ಲವುಗಳನ್ನೂ ನಿರೂಪಿಸಿದ ಶ್ರೇಯಸ್ಸು ಶ್ರೀಮದಾನಂದತೀರ್ಥ ಭಗವತ್ಪಾದರದು. ಅದಕ್ಕೆಂದೇ ಅವರು ಜಗದ್ಗುರುಗಳು, ಮೂಲಗುರುಗಳು.

ಅಷ್ಟಮಹಾಮಂತ್ರಗಳೊಂದಿಗೆ ಇತರ ಮಂತ್ರಗಳ ವಿವರಗಳು ತಂತ್ರಸಾರಕ್ಕೆ ಇಂದು ಉಪಲಬ್ಧವಿರುವ ಮೂವತ್ತಕ್ಕೂ ಹೆಚ್ಚಿನ ಟಿಪ್ಪಣಿಗಳಲ್ಲಿ ದೊರೆಯುತ್ತವೆ. ಅದರೊಂದಿಗೆ ಬಿದರಳ್ಳಿ ಶ್ರೀನಿವಾಸತೀರ್ಥರು, ಛಲಾರಿ ಶೇಷಾಚಾರ್ಯರು ಮೊದಲಾದವರು ಬರೆದಿರುವ 'ತಂತ್ರಸಾರ ಮಂತ್ರೋದ್ಧಾರ', 'ಮಂತ್ರ ಪ್ರಕಾಶನ ', 'ಮಂತ್ರಮಹೋದಧಿ' 'ಮಂತ್ರಪ್ರಕಾಶಿಕಾ' 'ಮಂತ್ರಪದ್ಧತಿ', 'ವರಾಹಾದಿ ಮಂತ್ರ ಪ್ರಕಾಶಿಕಾ' ಮೊದಲಾದವುಗಳು ಇವುಗಳ ವಿವರಣೆಗೆಂದೇ ರಚಿತವಾದ ಗ್ರಂಥಗಳು. ಶ್ರೀ ಸುಮತೀಂದ್ರತೀರ್ಥರು 'ಅಷ್ಟಮಹಾಮಂತ್ರ ವಿವರಣ' ಎಂಬ ಕೃತಿಯಲ್ಲಿ ಎಂಟು ಮೂಲಮಂತ್ರಗಳ ಜಪವಿಧಾನವನ್ನು ಸಂಗ್ರಹಿಸಿರುವರು. ಇವೆಲ್ಲ ಸಂಸ್ಕೃತದಲ್ಲಿ ರಚಿತವಾಗಿರುವ ಗ್ರಂಥಗಳು. ಸಂಸ್ಕೃತ ಬಾರದ ಆಸ್ತಿಕ ಜನತೆಗೆ ಅಂಥ ಗ್ರಂಥವೊಂದರ ಅವಶ್ಯಕತೆ ಇತ್ತು. ಅದನ್ನು ಶ್ರೀ ಪಿ. ವಿಷ್ಣುತೀರ್ಥರವರ 'ಅಷ್ಟಮಹಾಮಂತ್ರಗಳು' ಎಂಬ ಈ ಕೃತಿ ಸಮರ್ಥವಾಗಿ ನೀಗಿಸುತ್ತದೆ.

'ಅಷ್ಟಮಹಾಮಂತ್ರಗಳು' ಎಂಬ ಈ ಕೃತಿಯಲ್ಲಿ ಪೀಠಿಕಾ ಭಾಗ ಮತ್ತು ಅನುಷ್ಠಾನ ಕ್ರಮ ಎಂಬ ಎರಡು ಭಾಗಗಳಿವೆ. ಮಂತ್ರಗಳ ಬಗ್ಗೆ ಮಾಹಿತಿಗಳನ್ನೆಲ್ಲಾ ಪೀಠಿಕಾ ಭಾಗದಲ್ಲೂ ಅವುಗಳ ಅನುಷ್ಠಾನದ ವಿಧಿ-ವಿಧಾನವನ್ನು 'ಅನುಷ್ಠಾನಕ್ರಮ' ಭಾಗದಲ್ಲೂ ಸರಳವಾಗಿ, ಸಾಧಾರವಾಗಿ ತಿಳಿಸಿರುವರು. ಜೊತೆಗೆ ಯಾವುದೇ ಮಂತ್ರದ ಜಪಕ್ಕೆ ಪೂರ್ವಭಾವಿಯಾಗಿ ಅವಶ್ಯ ಜಪಿಸಲೇ ಬೇಕಾದ 'ಹಂಸಮಂತ್ರ'ದ ವಿಧಿ ವಿಧಾನವನ್ನೂ ಕೊಟ್ಟಿರುವರು. ತತ್ವನ್ಯಾಸ, ಮಾತೃಕಾನ್ಯಾಸ ಮೊದಲಾದ

ಮಂತ್ರಜಪಕ್ಕೆ ಅವಶ್ಯವಾದ ಇತರ ಎಲ್ಲಾ ವಿವರಗಳೂ ಇದರಲ್ಲಿ ಸಂಕಲಿತವಾಗಿವೆ. ಹೀಗಾಗಿ ಮಂತ್ರಾಭ್ಯಾಸಿಗಳಿಗೆ ಇದೊಂದು ಉತ್ತಮ ಕೈಪಿಡಿಯಾಗಿದೆ.

ಶ್ರೀ ವೇ|| ಪಿ. ವಿಷ್ಣುತೀರ್ಥರು ನವವೃಂದಾವನದಂಥ ಪವಿತ್ರ ಕ್ಷೇತ್ರದಲ್ಲಿ ಅನೇಕ ದಶಕಗಳ ಕಾಲ ಒಂಟಿಯಾಗಿ ನೆಲಸಿ ವಿಶೇಷ ಗುರುಸೇವೆ ಮಾಡಿದ ಭಾಗ್ಯಶಾಲಿಗಳು. ಈಚಿನ ದಿನಗಳಲ್ಲಿ ನಖಸ್ತುತಿ, ಹರಿವಾಯುಸ್ತುತಿ, ಮೊದಲಾದವುಗಳನ್ನು ವಿವರವಾಗಿ ಅನುವಾದಿಸಿರುವ ಉತ್ತಮ ಲೇಖಕರು. ತಮ್ಮ ಸರಳ ನಿರೂಪಣೆ ಮತ್ತು ಸರಳ ಜೀವನಗಳಿಂದ ತುಂಬಾ ಜನಪ್ರಿಯರಾಗಿದ್ದಾರೆ. ತಮ್ಮ ಈ ಎಂಬತ್ತೆರಡನೇ ಇಳಿ ವಯಸ್ಸಿನಲ್ಲೂ ಜ್ಞಾನಕಾರ್ಯದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿರುವ ಸಾಧಕರು. ಇಂತಹವರಿಂದ ಸಿದ್ಧವಾಗಿರುವ ಈ ಕೃತಿ ವಿಶೇಷ ಉಪಯುಕ್ತವಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಕನ್ನಡದಲ್ಲಿ ವಿರಳವಾದ ಈ ಬಗೆಯ ಪುಸ್ತಕವನ್ನು ರಚಿಸಿ ಆಸ್ತಿಕ ಜನತೆಗೆ ಅವರು ಮಾಡಿರುವ ಉಪಕಾರಕ್ಕಾಗಿ ಅವರನ್ನು ವಿಶೇಷವಾಗಿ ಅಭಿನಂದಿಸುತ್ತೇನೆ. ಇಂತಹ ವೈಷ್ಣವ ವಾಙ್ಮಯಸೇವೆ ಅವರಿಂದ ಇನ್ನೂ ವಿಶೇಷವಾಗಿ ನಡೆಯಲೆಂದು ಶ್ರೀಹರಿವಾಯುಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ವ್ಯಾಸನಕೆರೆ ಪ್ರಭಂಜನಾಚಾರ್ಯ

ಬೆಂಗಳೂರು,

ಅನಂತ ಚತುರ್ದಶೀ (ಭಾವ ಸಂ)

18-9-1994.

# ಪ್ರಸ್ತಾವನೆ

ಶ್ರೀ ಸಾಗರಕಟ್ಟೆಮಠದ ಹಿಂದಿನ ಸ್ವಾಮಿಗಳಾಗಿದ್ದ ಶ್ರೀ ಪ್ರದ್ಯುಮ್ನತೀರ್ಥರು ೧೯೩೫ರಲ್ಲಿ ಮೊಟ್ಟಮೊದಲು ನನಗೆ ಗುರುಮಂತ್ರ, ಹಂಸಮಂತ್ರ ಮತ್ತು ಅಷ್ಟಾಕ್ಷರ ಮಂತ್ರಗಳನ್ನು ಉಪದೇಶ ಮಾಡಿ ನನ್ನ ಜಪಾನುಷ್ಠಾನಕ್ಕೆ ತಳಪಾಯ ಹಾಕಿದರು. ಆಮೇಲೆ 1939ರಲ್ಲಿ ಪ್ರಾತಃಸ್ಮರಣೀಯರಾದ ಶ್ರೀ ಸತ್ಯಧ್ಯಾನತೀರ್ಥರು, ನಾನು ಗುರುಮಂತ್ರಗಳಿಗೆ ಬರೆದಿದ್ದ ಅರ್ಥವಿವರಣೆಯನ್ನು ಓದಿ ಸಂತೋಷಪಟ್ಟು ನನಗೆ ಶಾಂತಿಪಾಠ ಹಾಕಿದರಲ್ಲದೆ ಮಹಾಮಂತ್ರೋಪದೇಶ ಮಾಡುವುದಕ್ಕೆ ತಮ್ಮ ಮಠದ ಪಾಠಶಾಲೆಯಲ್ಲಿ ದ್ವೈತವೇದಾಂತಪ್ರಾಧ್ಯಾಪಕರಾಗಿದ್ದ ಶ್ರೀರಂಗದ ವಟ್ಟಿಂಗಾಡ್ ಮಾಧವಾಚಾರ್ಯರಿಗೆ ಅಪ್ಪಣೆ ಮಾಡಿದರು. ಅವರು 1942ರಲ್ಲಿ ನನಗೆ ತತ್ತ್ವನ್ಯಾಸ-ಮಾತೃಕಾನ್ಯಾಸಗಳಿಂದ ಆರಂಭಿಸಿ ಅಷ್ಟಮಹಾಮಂತ್ರಗಳನ್ನೂ ಇನ್ನೂ ಅನೇಕ ಮುಖ್ಯಮಂತ್ರಗಳನ್ನೂ ಅತ್ಯಂತ ಪ್ರೀತಿ ವಿಶ್ವಾಸ ಪೂರ್ವಕವಾಗಿ, ಟೀಕಾರಾಯರು ಹೇಳಿದಂತೆ "ಶುಕವಚ್ಛಿಕ್ಷಿತಸ್ಯ ಮೇ" ಎಂಬಂತೆ ಹತ್ತಿರ ಕೂಡಿಸಿಕೊಂಡು ವಿಧಾನಗಳನ್ನೂ ತೋರಿಸಿ ಹೇಳಿಕೊಟ್ಟರು. ಇದಾದ ನಂತರ ನನಗೆ ಕುಂಭಕೋಣದ ಶ್ರೀ ಟಿ.ಆರ್. ಕೃಷ್ಣಾಚಾರ್ಯರು ಸಂಪಾದಿಸಿದ 'ಮಾಧ್ವ ಮಂತ್ರರತ್ನಾಕರ'ವೆಂಬ ಗ್ರಂಥವು ದೊರಕಿದ್ದರಿಂದ ಸುವರ್ಣಕ್ಕೆ ಸುಗಂಧವೂ ದೊರಕಿದಂತಾಯಿತು.

ಇದಾದ ನಂತರ 1947ರಲ್ಲಿ ಶ್ರೀಮನ್ಮಂತ್ರಾಲಯಪ್ರಭುಗಳವರು ನನ್ನನ್ನು ತಮ್ಮಲ್ಲಿಗೇ ಬರಮಾಡಿಕೊಂಡು ಎಂಟು ತಿಂಗಳು ಕಾಲ ಇಟ್ಟುಕೊಂಡಿದ್ದು ನನಗೆ ಅಷ್ಟಮಹಾಮಂತ್ರಗಳ ಜೊತೆ ದ್ವಾಸಪ್ತತಿ ಮಹಾಮಂತ್ರಗಳನ್ನೂ ಅನುಷ್ಠಾನ ಮಾಡುವ ಸುಯೋಗವನ್ನು ಒದಗಿಸಿಕೊಟ್ಟರು. ಆ ಮಹಾನುಭಾವರ ಪರಮಾನುಗ್ರಹ ವಿಶೇಷದಿಂದಲೇ ಇನ್ನೂ ಮುಂದೆ ಚಕ್ರತೀರ್ಥದ ಯಂತ್ರೋದ್ಧಾರಕರ ಬಳಿಯಲ್ಲೂ ನವವೃಂದಾವನಗಳ ಸನ್ನಿಧಿಯಲ್ಲೂ ಇಪ್ಪತ್ತು ವರ್ಷಗಳಿಗೂ ಹೆಚ್ಚುಕಾಲ ಜಪಾನುಷ್ಠಾನ ಮಾಡುವ ಮಹಾಪುಣ್ಯ ಲಭಿಸಿತು. ನವವೃಂದಾವನದಲ್ಲಿದ್ದ ಕಾಲದಲ್ಲೇ ನನಗೆ ಎಲ್ಲ ಮಂತ್ರಗಳಿಗೂ ಅತ್ಯವಶ್ಯವಾದ, ಆದರೂ ಅತ್ಯಂತ ಅಪೂರ್ವವಾದ, ತಂತ್ರಸಾರೋಕ್ತವಾದ, ಸಕಲ ಮಂತ್ರಗಳ ವರ್ಣನ್ಯಾಸ- ಅಂಗುಲಿನ್ಯಾಸಗಳ ವಿಧಾನವೂ ಆ ನವಯತಿವರೇಣ್ಯರ ವಿಶೇಷಾನುಗ್ರಹರೂಪವಾಗಿ ದೊರಕಿತಲ್ಲದೆ ಅವುಗಳ ಸಾಕಷ್ಟು ಅನುಭವವೂ ಅಲ್ಲೇ ಲಭ್ಯವಾಯಿತು.

ಅಷ್ಟಮಹಾಮಂತ್ರಗಳನ್ನು ನಾನು ಮೊಟ್ಟಮೊದಲು ಉಪದೇಶಿಸಿದ್ದೆಂದರೆ ನನಗೆ ಸಹೋದರಪ್ರಾಯರಾದ ನಮ್ಮ ಬಂಧು ಶೇಷಣ್ಣ ಎಂಬುವರಿಗೆ. ಅನೇಕ ವರ್ಷಗಳಾದ

ಮೇಲೆ ಬೆಂಗಳೂರಿನಲ್ಲಿರುವ ನನ್ನ ಮಿತ್ರ ವರ್ಗಕ್ಕೆ ಸೇರಿದ ಸರ್ವಶ್ರೀ ಶ್ರೀಶಮೂರ್ತಿ, ನರಸಿಂಹಮೂರ್ತಿ, ಮಾಧವರಾವ್, ಕೃಷ್ಣಮೂರ್ತಿ, ಮೋಹನ್, ಎನ್. ಆರ್. ಆನಂದ ಬೊಂಬಾಯಿಯಲ್ಲಿರುವ ಪ್ರಭಂಜನ ಕುಲಕರ್ಣಿ ಮೊದಲಾದವರಿಗೆ ಹೇಳಿಕೊಟ್ಟೆ. ಇದೇ ಸಮಯದಲ್ಲೇ ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸಗಳ ವಿಸ್ತಾರವಾದ ನಿರೂಪಣೆಯೂ 'ವಾಸುದೇವಪದಸಂತತಸಂಗೀ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಐದಾರು ವರ್ಷಗಳವರೆಗೂ ಪ್ರಕಟವಾಯಿತು.

ಇಷ್ಟರಲ್ಲೇ ಒಂದಾವರ್ತಿ ನಾನು ಗೋಪಾಲದಾಸರ ಆರಾಧನೆಗಾಗಿ ಲಕ್ಷ್ಮೇಶ್ವರಕ್ಕೆ ಹೋಗಿದ್ದಾಗ ನಮ್ಮ ಮಿತ್ರರು ಶ್ರೀ ಬಾಬಣ್ಣನವರು (ಬಾಬೂರಾವ್ ಕುಲಕರ್ಣಿಯವರು) ತಮಗೆ ಅಷ್ಟಾಕ್ಷರ ಮಹಾಮಂತ್ರ ವಿಧಾನವನ್ನು ತೋರಿಸಿಕೊಡಲು ಕೇಳಿದ್ದರಿಂದ ಅದನ್ನು ಬರೆದುಕೊಟ್ಟು ಮಾಡುವ ವಿಧಾನವನ್ನೂ ತೋರಿಸಿಕೊಟ್ಟೆ. ಅದರಿಂದ ಹುರುಪುಗೊಂಡ ಅವರು " ಅಷ್ಟಮಹಾಮಂತ್ರಗಳ ಜಪ ವಿಧಾನವನ್ನೂ ಹೀಗೆಯೇ ಬರೆದುಕೊಟ್ಟರೆ ನಾವು ಅದನ್ನು ನಮ್ಮ ಮಂತ್ರಾಲಯ ಪಾದಯಾತ್ರಾ ಸಂಘದ ವತಿಯಿಂದ ಮುದ್ರಿಸಿ ಪ್ರಕಟಿಸುತ್ತೇವೆ. ಆಮೇಲೆ ಈ ಮಂತ್ರಗಳ ಜಪ ವಿಧಾನವನ್ನೂ ನಮಗೆ ಕಲಿಸಿಕೊಡುವಿರಂತೆ" ಎಂದು ಹೇಳಿದರು. ಇದರಿಂದ ನನ್ನ ಅಭಿಲಾಷೆಯೆಂಬ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಯಿತು. ಏಕೆಂದರೆ 'ವಾಸುದೇವಪದಸಂತತಸಂಗಿ'ಯಲ್ಲಿ ಧಾರಾವಾಹಿಯಾಗಿ ಅನೇಕ ವರ್ಷಗಳಲ್ಲಿ ಬರುವುದಕ್ಕಿಂತ ಪುಸ್ತಕ ರೂಪವಾಗಿ ಬಂದರೆ ಎಲ್ಲರಿಗೂ ಅನುಕೂಲ ಎನ್ನಿಸಿತು ನನಗೆ. ಅದರಿಂದ ನಾನು ಕುಳಿತು ಈ ಗ್ರಂಥವನ್ನು ಸುಮಾರು ಮೂರು ತಿಂಗಳ ಅವಧಿಯಲ್ಲಿ ಬರೆದು ಶ್ರೀಮುಖ ಸಂವತ್ಸರದ ನವರಾತ್ರಿ ಹೊತ್ತಿಗೆ ಮುಗಿಸಿದೆ. ಅದೇ ಸಂವತ್ಸರದ ಪುಷ್ಯ ಮಾಸದಲ್ಲಿ ಇದನ್ನು ಮುದ್ರಣಕ್ಕೆ ಕೊಟ್ಟರೂ ಅದರ ಮುದ್ರಣ ಈ ಭಾವನಾಮ ಸಂವತ್ಸರದ ಕಾರ್ತಿಕ ಮಾಸದವರೆಗೂ ಅನೇಕ ಕಾರಣಗಳಿಂದ ಎಳೆದುಕೊಂಡು ಹೋಯಿತು.

ಈ ಗ್ರಂಥಕ್ಕೆ ತಮ್ಮ ಅನುಗ್ರಹ ವಚನವನ್ನು ಬರೆದುಕೊಡಬೇಕಾಗಿ ಪ್ರಾರ್ಥಿಸಿಕೊಂಡಾಗ ಮಠಾಧೀಶರೂ ಪೂಜ್ಯಯತಿವರೇಣ್ಯರುಗಳೂ ಆದ ಶ್ರೀ ಮುಳಬಾಗಿಲು ಶ್ರೀಪಾದರಾಜಮಠ, ವ್ಯಾಸರಾಜ ಮಠ (ಸೋಸಲೆ), ಶ್ರೀ ಪೇಜಾವರ ಮಠ ಮತ್ತು ರಾಘವೇಂದ್ರಸ್ವಾಮಿಗಳ ಮಠಗಳ ಶ್ರೀಪಾದಂಗಳವರೆಲ್ಲರೂ ತಮ್ಮ ಆಶೀರ್ವಚನವನ್ನು ಬರೆದುಕೊಟ್ಟು ನನಗೆ ಪರಮಾನುಗ್ರಹ ಮಾಡಿದ್ದಾರೆ. ಹೀಗೆ ಅನೇಕ ಯತಿವರೇಣ್ಯರ ಅನುಗ್ರಹ ವಿಶೇಷ ದೊರಕಿದ್ದು ನೋಡಿದರೆ ಮಧ್ವಾಂತರ್ಗತ ಸಾಕ್ಷಾತ್ ಶ್ರೀ ಲಕ್ಷ್ಮೀಹಯಗ್ರೀವ ದೇವರ ಅನುಗ್ರಹವೇ ಈ ಗ್ರಂಥಕ್ಕೆ ದೊರಕಿದಂತಾಗಿದೆ. ಈ ಗ್ರಂಥದಲ್ಲಿ ತೋರಿಸಿರುವ ಅನುಷ್ಠಾನಕ್ರಮವೆಲ್ಲವೂ ಶ್ರೀ ಮಧ್ವಾಚಾರ್ಯರ ತಂತ್ರಸಾರೋಕ್ತ ಕ್ರಮದಲ್ಲೇ ಇವೆ. ಕೆಲವು ಕ್ರಮಗಳು ಇತರ ಪುಸ್ತಕಗಳಲ್ಲಿ

ದೊರಕದಿರುವುದರಿಂದ ಹೊಸದಾಗಿ ಕಾಣುತ್ತವೆಯಾದರೂ ಅವುಗಳೆಲ್ಲಕ್ಕೂ ಮಹಾಮಹನೀಯರ ಒಪ್ಪಿಗೆ ಇದೆಯೆಂಬುದರಲ್ಲಿ ಏನೂ ಸಂದೇಹವಿಲ್ಲ.

ಕಡೆಯದಾಗಿ ಶಾಸ್ತ್ರ ಪ್ರವಚನ ಕೇಸರಿ, ಪಂಡಿತರತ್ನಂ, ವಿದ್ಯಾವಾಚಸ್ಪತಿ, ಸಚ್ಛಾಸ್ತ್ರವಿಚಕ್ಷಣ ರತ್ನಂ, ಇತ್ಯಾದಿ ಬಿರುದಾಂಕಿತರಾದ ಶ್ರೀ ಮ||ಶಾ||ಸಂ||ವ್ಯಾಸನಕೆರೆ ಪ್ರಭಂಜನಾಚಾರ್ಯ, ಎಂ.ಎ., ಇವರು ಈ ಗ್ರಂಥವನ್ನು ಸಮಗ್ರವಾಗಿ ಅವಲೋಕನ ಮಾಡಿ ಎಲ್ಲರಿಗೂ ಉಪಯುಕ್ತವಾಗುವಂತೆ ಮುನ್ನುಡಿ ಬರೆದುಕೊಟ್ಟು ಪರಮಾನುಗ್ರಹ ಮಾಡಿದ್ದಾರೆ. ಅದಕ್ಕಾಗಿ ಅವರಿಗೆ ನಾವೆಲ್ಲರೂ ಅತ್ಯಂತ ಕೃತಜ್ಞರಾಗಿದ್ದೇವೆ.

ಇನ್ನು ಈ ಗ್ರಂಥದ ಮುದ್ರಣಕ್ಕಾಗಿ ಯಾತ್ರಾಸಂಘದಿಂದ ಮೊದಲೇ ಮೂರುಸಾವಿರ ರೂಪಾಯಿಗಳ ನೆರವು ದೊರಕಿತು. ಅನಂತರ ಅನುಗ್ರಹವಚನ ಕೊಡುವುದರ ಜೊತೆಗೆ ಶ್ರೀಪಾದರಾಜಮಠದ ಶ್ರೀ ಶ್ರೀಗಳವರು ಆರ್ಥಿಕವಾಗಿಯೂ ನೆರವು ನೀಡಿ ಅನುಗ್ರಹಿಸಿದರು. ಇತ್ತೀಚೆಗೆ ಮೈಸೂರಿನ ಶ್ರೀ ವೆಂಕಟೇಶ್ ಅವರೂ ಶ್ರೀಮತಿ ಶಾಂತಾಬಾಯಿ ಮುದ್ದೇಬಿಹಾಳ್ ಇವರೂ, ಬೊಂಬಾಯಿನ ಡಾ. ಎ.ಆರ್. ಆಚಾರ್ಯರೂ, ಸರ್ವಶ್ರೀ ಪಿ. ಪ್ರಹ್ಲಾದರಾವ್, ಎಂ. ನಾರಾಯಣ, ಮೂಗೂರು ರಾಘವೇಂದ್ರರಾವ್, ಸತ್ತಿ ರಾಘವೇಂದ್ರರಾವ್, ಎನ್. ಆರ್. ಆನಂದ ಮೊದಲಾದವರೂ ಮುದ್ರಣದ ಖರ್ಚಿಗಾಗಿಯೇ ಉದಾರವಾಗಿ ದಾನ ಮಾಡಿದ್ದಾರೆ. ಇವರೆಲ್ಲರಿಗೂ ಶ್ರೀಹರಿವಾಯುಗುರುಗಳು ಐಹಿಕಾಮುಷ್ಮಿಕ ಸಂಪತ್ತನ್ನು ಅನುಗ್ರಹಿಸಲೆಂದು ಅವರನ್ನು ಭಕ್ತ್ಯಾದರಗಳಿಂದ ಪ್ರಾರ್ಥಿಸುತ್ತಿದ್ದೇನೆ.

ಈ ಗ್ರಂಥವನ್ನು ಎಷ್ಟೇ ಎಚ್ಚರಿಕೆಯಿಂದ ಬರೆದಿದ್ದರೂ ಅಜ್ಞಾತವಾಗಿ ಮನುಷ್ಯಮಾತ್ರರಿಗೆ ಸಂಭವವಾದ ಅನೇಕ ಲೋಪದೋಷಗಳು ಇದರಲ್ಲಿ ಇದ್ದೇ ಇವೆಯೆಂಬುದು ನನಗೆ ಗೊತ್ತು. ಅಂತಹ ಸಕಲ ಲೋಪ ದೋಷಗಳನ್ನು ನನಗೆ ತೋರಿಸಿಕೊಟ್ಟು ಅನುಗ್ರಹಿಸಬೇಕಲ್ಲದೆ ಅವುಗಳನ್ನು ಸುಧಾರಿಸಿಕೊಂಡು ಈ ಗ್ರಂಥದ ಉಪಯೋಗವನ್ನು ಪಡೆಯಬೇಕೆಂದು ಎಲ್ಲರಲ್ಲೂ ನನ್ನ ಸವಿನಯ ನಿವೇದನೆ.

ಇತಿ, ಸಜ್ಜನ ವಿಧೇಯ

ಮೈಸೂರು
ವಿಷ್ಣುತೀರ್ಥ

ದಿನಾಂಕ. 12-11-94
ಕಾರ್ತಿಕ ಶುದ್ಧ ದಶಮಿ

# ನಿವೇದನೆ

ನಮ್ಮ ಮಂತ್ರಾಲಯ ಪಾದಯಾತ್ರಾ ಸಂಘವು ಈ ಒಳಗಾಗಿ ಕೆಲವು ಆಧ್ಯಾತ್ಮಿಕ ಪ್ರಕಟಣೆಗಳನ್ನು ಹೊರತಂದಿದೆ. ಯಾತ್ರಿಕರನ್ನಾಗಲೀ ಯಾತ್ರಾ ತಂಡದ ಅಭಿಮಾನಿಗಳನ್ನಾಗಲಿ ಅಥವಾ ಇನ್ನಿತರ ಆಧ್ಯಾತ್ಮ ಬಂಧುಗಳನ್ನಾಗಲಿ ಸಾಧನೆಯ ಮಾರ್ಗದಲ್ಲಿ ಮುನ್ನಡೆಸುವುದೇ ಈ ಪ್ರಕಟಣೆಗಳ ಉದ್ದೇಶವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಶ್ರೀ ಕೃಷ್ಣಾವಧೂತಕೃತ 'ಅಕ್ಷರಮಾಲಿಕಾ ಸ್ತೋತ್ರ' ಹಾಗೂ 'ಸ್ತೋತ್ರ ಸಂಗ್ರಹ,' ಇವು ನಮ್ಮ ಯಾತ್ರಾ ಸಂಘದ ಹೆಮ್ಮೆಯ ಪ್ರಕಟನೆಗಳಾಗಿದ್ದು, ಬಹು ಜನಪ್ರಿಯವಾಗಿದೆ ಎಂಬುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇವೆ.

ಧರ್ಮಾಚರಣೆಗೆ ಬಹು ಕಠಿಣವಾದ ಈ ಕಲಿಯುಗದಲ್ಲಿ ಕಿಂಚಿತ್ ಧರ್ಮಾಚರಣೆಯೂ ಬಹು ಫಲಪ್ರದವಾದುದು ಎಂದು ಸ್ವಯಂ ವೇದವ್ಯಾಸರೇ ಕೈ ಎತ್ತಿ ಸಾರಿದ್ದಾರೆ. ಮುಮುಕ್ಷುಗಳಿಗೆ ಇದು ಅವರ ಸಂದೇಶ. ಇದನ್ನು ಲಕ್ಷ್ಯದಲ್ಲಿರಿಸಿಕೊಂಡು ಶ್ರೀ ಹರಿವಾಯುಗುರುಗಳ ಪರಮಾನುಗ್ರಹವನ್ನು ಪಡೆಯುವದನ್ನೇ ಧ್ಯೇಯವಾಗಿರಿಸಿಕೊಂಡು ನಮ್ಮ ಯಾತ್ರಿಕರಿಗೆ ಆಚಾರ ಮಾರ್ಗದರ್ಶನವನ್ನು ನೀಡುವ ಉದ್ದೇಶದಿಂದ ಒಂದು ಆಧ್ಯಾತ್ಮಿಕ ಕೈಪಿಡಿಯನ್ನು ಪ್ರಕಟಿಸಲು ನಮ್ಮ ಸಂಘವು ನಿರ್ಧರಿಸಿತು. ಇದರ ಫಲವೇ "ಅಷ್ಟಮಹಾಮಂತ್ರಗಳು"

ಆಚಾರ್ಯ ಮಧ್ವರು ತಮ್ಮ ತಂತ್ರಸಾರ ಎಂಬ ಗ್ರಂಥದಲ್ಲಿ "ಏತೇ ತು ಸರ್ವಮಂತ್ರಾಣಾಂ ಮೂಲಮಂತ್ರಾ ವಿಶೇಷತಃ" ಎಂದು ಹೇಳಿ ಈ ಎಂಟು ಮಂತ್ರಗಳು ಸಪ್ತಕೋಟಿ ಮಹಾಮಂತ್ರಗಳಿಗೆ ಆಧಾರವಾಗಿವೆ ಎಂದು ಹೇಳಿದ್ದಾರೆ. ಇವುಗಳಲ್ಲಿ ಸಮಸ್ತ ವೇದಾದಿಗಳ ಅರ್ಥವು ಅಡಕವಾಗಿದೆ.

ಪ್ರಸ್ತುತ ಪುಸ್ತಕದಲ್ಲಿ ಆ ಅಷ್ಟಮಹಾಮಂತ್ರಗಳ ಜಪಾನುಷ್ಠಾನ ಕ್ರಮವನ್ನು ಎಲ್ಲರಿಗೂ ಅರ್ಥವಾಗುವಂತೆ ಪೂಜ್ಯ ಶ್ರೀ ವಿಷ್ಣುತೀರ್ಥರು ಬರೆದಿದ್ದಾರೆ. ಈ ಮಂತ್ರಗಳನ್ನು ನಮ್ಮ ಯಾತ್ರಿಕರು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳಲಿ ಎಂದು ಅಪೇಕ್ಷಿಸುತ್ತೇವೆ. ನುಡಿದಂತೆ ನಡೆಯುವ ವಿರಳಾತಿವಿರಳ ವ್ಯಕ್ತಿಗಳಲ್ಲಿ ಪೂಜ್ಯಶ್ರೀ ವಿಷ್ಣುತೀರ್ಥರೂ ಒಬ್ಬರು. ತಮ್ಮ ಸಮಗ್ರ ಜೀವಿತವನ್ನೇ ಆಧ್ಯಾತ್ಮಿಕ ಸಾಧನೆಗೆ ಮೀಸಲಿಟ್ಟ ಪುಣ್ಯಚೇತನ ಅವರದು. ಶ್ರೀ ಮಧ್ವಾಚಾರ್ಯರ ಸಮಗ್ರ ಗ್ರಂಥಗಳ ತಲಸ್ಪರ್ಶಿ ಅಧ್ಯಯನ ಅವರಿಗಿದೆ. ಈಗಾಗಲೇ ಹಲವಾರು ಆಧ್ಯಾತ್ಮಿಕ ಹೊತ್ತಿಗೆಗಳನ್ನೂ ಬಿಡಿ ಲೇಖನಗಳನ್ನೂ ಬರೆದು ಉತ್ತಮ ಲೇಖಕರೆಂದು ಪ್ರಸಿದ್ಧಿ ಪಡೆದಿದ್ದಾರೆ.

ನಮ್ಮ ಯಾತ್ರಾ ಸಂಘದ ಅಭಿಮಾನಿಗಳೂ ನಮ್ಮ ಹಿತೈಷಿಗಳೂ ಆದ ಪೂಜ್ಯ ಶ್ರೀ ವಿಷ್ಣುತೀರ್ಥರು, ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ಬಹಳಷ್ಟು ಶ್ರಮವಹಿಸಿ, ಈ ಚಿಕ್ಕ ಹೊತ್ತಿಗೆಯನ್ನು ಬರೆದುಕೊಟ್ಟು ನಮಗೆ ಮಹದುಪಕಾರ ಮಾಡಿದ್ದಾರೆ. ಅವರಿಗೆ ಹೇಗೆ ಕೃತಜ್ಞತೆ ಹೇಳಬೇಕೋ ತಿಳಿಯುತ್ತಿಲ್ಲ. ನಮ್ಮ ಯಾತ್ರಾ ಸಂಘವು ಅವರಿಗೆ ಚಿರಋಣಿ.

ಶ್ರೀ ಗುರುರಾಜರ ಅಂತರ್ಗತ ಶ್ರೀಮನ್ಮೂಲರಾಮಚಂದ್ರನು ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನು ಅನುಗ್ರಹಿಸಲೆಂದು ಮನಃಪೂರ್ವಕ ಪ್ರಾರ್ಥಿಸುತ್ತೇವೆ.

ಇತಿ,

ಸಜ್ಜನ ವಿಧೇಯ,

ವೈದ್ಯ ಬಾಬುರಾವ್ ಕುಲಕರ್ಣಿ

ಸಂಸ್ಥಾಪಕರು, ಶ್ರೀ ಮಂತ್ರಾಲಯ ಪಾದಯಾತ್ರಾ ಸಂಘ,

ಲಕ್ಷ್ಮೇಶ್ವರ ಶಾಖಾ

ಶ್ರೀನಿವಾಸರಾವ್ ಕುಲಕರ್ಣಿ

(ತಂಗೋಡ) ಕಾರ್ಯಾಧ್ಯಕ್ಷರು

ಕೆ. ಆರ್. ದೇಶಪಾಂಡೆ,

ಅಧ್ಯಕ್ಷರು, ಧಾರವಾಡ ಶಾಖಾ

ದಿನಾಂಕ 1-1-1994

# ವಿಷಯಾನುಕ್ರಮಣಿಕೆ

## ಅಷ್ಟಮಹಾಮಂತ್ರಗಳು-ಪೂರ್ವ ಭಾಗ



## ಅಷ್ಟಮಹಾಮಂತ್ರಗಳು-ಉತ್ತರಭಾಗ
## ಅನುಷ್ಠಾನ ಕ್ರಮಗಳು

ಶ್ರೀಮಧ್ವಾಂತರ್ಗತ ಶ್ರೀ ವೇದವ್ಯಾಸಾಯ ನಮಃ

# ಅಷ್ಟಮಹಾಮಂತ್ರಗಳು

## ಪೂರ್ವಭಾಗ—ಪೀಠಿಕೆಗಳು

(ಲೇಖಕನ ಮಂಗಳಾಚರಣೆ)

ನಾರಾಯಣಂ ಗುಣೈಃ ಸರ್ವೈ—ರುದೀರ್ಣಂ ದೋಷವರ್ಜಿತಮ್
ಪ್ರಣಮಾಮಿ ರಮಾಕಾಂತಂ ಮಧ್ವಮಾನಸಮಂದಿರಮ್ ೧

(ಅರ್ಥ) ಸಮಸ್ತ ಗುಣಪರಿಪೂರ್ಣನೂ ಸಮಸ್ತ ದೋಷದೂರನೂ, ಶ್ರೀಮನ್ಮಧ್ವಾಚಾರ್ಯರ ಮನೋನಿವಾಸಿಯೂ ಆದ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ.

ಪ್ರಣಮ್ಯ ಶ್ರೀಮದಾನಂದ — ತೀರ್ಥಾದಿಗುರುಶೇಖರಾನ್।
ತತ್ಕೃಪಾದೃಷ್ಟಿಪೂತೋಽಹಂ ತದನುಗ್ರಹಸಿದ್ಧಯೇ ೨

(ಅರ್ಥ) ಶ್ರೀಮನ್ಮಧ್ವಾಚಾರ್ಯರೇ ಮೊದಲಾದ ಎಲ್ಲಾ ಹಿರಿಯ ಗುರುಗಳಿಗೂ ನಮಸ್ಕಾರ ಮಾಡಿ, ಅವರ ಕೃಪಾದೃಷ್ಟಿಯಿಂದ ಪೂತಾತ್ಮನಾದ ನಾನು, ಅವರೆಲ್ಲರ ಅನುಗ್ರಹಸಿದ್ಧಿಗಾಗಿ

ವಕ್ಷ್ಯಾಮಿ ಮೂಲಮಂತ್ರಾಣಾಂ ಪೀಠಿಕಾಂ ಮಾರ್ಗದರ್ಶಿನೀಮ್ ।
ಏತಜ್ಜಪಾಚ್ಚ ಪಾಠಾದ್ವಾ ಮಧ್ವೇಶಃ ಪ್ರೀಯತೇ ಹರಿಃ ೩

(ಅರ್ಥ) ಅಷ್ಟಮಹಾಮಂತ್ರಗಳಿಗೆ ಮಾರ್ಗದರ್ಶನ ಮಾಡುವ ಪೀಠಿಕೆಯನ್ನು ಹೇಳುತ್ತೇನೆ. ಇವುಗಳ ಜ್ಞಾನದಿಂದಲೂ ಜಪಾನುಷ್ಠಾನದಿಂದಲೂ ಅಥವಾ ಪೀಠಿಕೆಯನ್ನು ಓದುವುದರಿಂದಲೂ ಮಧ್ವಾಂತರ್ಗತ ಶ್ರೀಹರಿಯು ಪ್ರೀತನಾಗುತ್ತಾನೆ.

1. ಮಂತ್ರ ಶಬ್ದಾರ್ಥ — ' ಮನು ಅವಬೋಧನೇ' ಎಂಬ ಧಾತುವಿಗೆ ತಿಳಿ, ತಿಳಿದುಕೋ ಎಂದು ಅರ್ಥವಿದೆ. ಇದರ ಮೇಲೆ ಉಣಾದಿ ತ್ರ ಪ್ರತ್ಯಯ ಸೇರಿ ಮಂತ್ರ ಎಂದಾಗಿದೆ. ಮಹಾನುಭಾವರಿಂದ ದೃಷ್ಟವಾಗಿ ಮಹಾಫಲಪ್ರದವಾದ ವರ್ಣಕ್ಕೆ ಅಥವಾ ವರ್ಣಸಮೂಹಕ್ಕೆ ಮಂತ್ರವೆಂದು ಹೆಸರು. ಕೆಲವು ಒಂದೊಂದೇ ಅಕ್ಷರದ ಮಂತ್ರಗಳೂ ಇವೆ, ಎರಡು—ಮೂರು, ಐದು, ಆರು, ಎಂಟು, ಹನ್ನೆರಡು ಹೀಗೆ ಅನೇಕ ವರ್ಣಗಳುಳ್ಳ ಮಂತ್ರಗಳೂ ಇವೆ. ಮಂತಾರಂ ತ್ರಾಯತೇ ಇತಿ ಮಂತ್ರಃ, ಅದನ್ನು ತಿಳಿದವನನ್ನು ರಕ್ಷಿಸುವುದರಿಂದ ಅವಕ್ಕೆ ಮಂತ್ರ ಎಂಬ ಹೆಸರು ಬಂದಿದೆ. (ಮನ್—ತಿಳಿದವನನ್ನು, ತ್ರ — ರಕ್ಷಿಸು).

**2. ಆದರ ಪ್ರಭೇದಗಳು** — ಅನೇಕ ಮಂತ್ರಗಳು ವೇದೋಕ್ತವಾಗಿವೆ; ಅವನ್ನು 'ವೈದಿಕ ಮಂತ್ರ'ಗಳೆನ್ನುತ್ತಾರೆ. ತಂತ್ರಗ್ರಂಥೋಕ್ತ ಅನೇಕ ಮಂತ್ರಗಳೂ ಇವೆ, ಅವನ್ನು 'ಲೌಕಿಕ ಮಂತ್ರ'ಗಳೆನ್ನಬಹುದು. ಆದರೆ ಮಾಧ್ವರಿಗೆ ಶ್ರೀಮದಾಚಾರ್ಯರು ತಂತ್ರಸಾರದಲ್ಲಿ ಹೇಳಿದ ಮಂತ್ರಗಳೇ ಹೆಚ್ಚು ಪ್ರಮಾಣ. ತಂತ್ರಸಾರದಲ್ಲೂ ಶ್ರೀಮದಾಚಾರ್ಯರು ಕೆಲವು ಮುಖ್ಯ ಮಂತ್ರಗಳನ್ನು ಮೊದಲನೇ ಅಧ್ಯಾಯದಲ್ಲೂ ಇನ್ನೂ ಕೆಲವನ್ನು ನಾಲ್ಕನೇ ಅಧ್ಯಾಯದ ಮೊದಲನೇ ನೂರಿಪ್ಪತ್ತು ಶ್ಲೋಕಗಳಲ್ಲೂ ಹೇಳಿದ್ದಾರೆ. ಆ ಪೈಕಿ ಪ್ರಥಮಾಧ್ಯಾಯದಲ್ಲಿ ಕೇವಲ ಎಂಟು ಮಂತ್ರಗಳನ್ನು ಮಾತ್ರ ನಿರೂಪಣೆ ಮಾಡಿದ್ದಾರೆ; ಅವನ್ನೇ 'ಅಷ್ಟಮಹಾಮಂತ್ರ'ಗಳೆಂದು ಕರೆಯುವುದು ರೂಢಿ. ಈ ಅಷ್ಟಮಹಾಮಂತ್ರಗಳನ್ನು ಶ್ರೀಮದಾಚಾರ್ಯರು ಪ್ರಥಮಾಧ್ಯಾಯದ ಪ್ರಾರಂಭದ ಹದಿನಾಲ್ಕು ಶ್ಲೋಕಗಳಲ್ಲೇ ಉದ್ಧಾರ ಮಾಡಿದ್ದಾರೆ. ಮುಂದಿನ ಮೂವತ್ತೆರಡು ಶ್ಲೋಕಗಳಲ್ಲಿ ಈ ಮಂತ್ರಗಳ ಅನುಷ್ಠಾನಕ್ರಮವನ್ನು ಹೇಳಿ ಮುಗಿಸಿದ್ದಾರೆ.

**3. ಸಪ್ತಕೋಟಿ ಮಹಾಮಂತ್ರಗಳು** — ಜಗತ್ತಿನಲ್ಲಿ ಏಳು ಕೋಟಿ ಮಹಾಮಂತ್ರಗಳಿವೆಯೆಂಬುದು ಶ್ರೀಮಂತ್ರಾಲಯರಾಯರ ಪ್ರಾತಃಸಂಕಲ್ಪ ಗದ್ಯದ 'ಸಂಸಿದ್ಧ–ಸಪ್ತಕೋಟಿ–ಮಹಾಮಂತ್ರಾಣಾಂ' ಎಂಬ ಹೇಳಿಕೆಯಿಂದ ತಿಳಿದು ಬರುತ್ತದೆ. ಆದರೆ ಅವುಗಳಲ್ಲಿ ಅನೇಕ ಮಂತ್ರಗಳ ವೀರ್ಯವು (ಪ್ರಭಾವವು) ಕಲಿಯುಗದಲ್ಲಿ ಕಲಿಯ ಪ್ರಭಾವದಿಂದ ಮುಚ್ಚಿಹೋಗಿರುತ್ತವೆಯೆಂದು ಶ್ರೀಮದಾಚಾರ್ಯರೇ ತಂತ್ರಸಾರದಲ್ಲಿ (೪೮ ೪೬ ಶ್ಲೋಕದಲ್ಲಿ) ಹೇಳಿದ್ದಾರೆ —

ದೃಷ್ಟಾರ್ಥ ಏವ ಮಂತ್ರಾಣಾಂ ಕಲೌ ವೀರ್ಯಂ ತಿರಸ್ಕೃತಮ್

(ಅರ್ಥ) ಮಂತ್ರಗಳ ಪ್ರಯೋಜನವು (ಫಲವು) ಯದ್ಯಪಿ ಯಾವಾಗಲೂ ಇರುತ್ತದೆಯಾದರೂ ಅನೇಕ ಮಂತ್ರಗಳ ವೀರ್ಯವು (ಪ್ರಾಬಲ್ಯವು, ಶಕ್ತಿಯು) ಕಲಿಯುಗದಲ್ಲಿ ಮುಚ್ಚಿಹೋಗಿರುತ್ತದೆ (ತಿರಸ್ಕೃತ–ಮರೆಯಾದ, ಕಣ್ಣಿಗೆ ಕಾಣಿಸದ). ಆದರೂ ಕೆಲವು ಮಂತ್ರಗಳ ವೀರ್ಯವು ಮಾತ್ರ ಕಲಿಯುಗದಲ್ಲಿ ಮುಚ್ಚಿಹೋಗದೆ ಪ್ರಜ್ವಲಿಸುತ್ತಿರುತ್ತದೆ; ಅಂಥಾ ಮಂತ್ರಗಳನ್ನೇ ನಾನು ಇಲ್ಲಿ ಉದ್ಧರಿಸಿದ್ದೇನೆ' ಎಂದು ಅವರು ಹೇಳುತ್ತಾರೆ (ಅ. ೪, ೪೬ ಶ್ಲೋ) —

ತತ್ರಾಪ್ಯುದ್ದೀಪ್ತವೀರ್ಯಾ ಹಿ ಮಂತ್ರಾ ಅತ್ರ ಪ್ರಕೀರ್ತಿತಾಃ

(ಅರ್ಥ) ಅದರಲ್ಲೂ (ಎಂದರೆ ಕಲಿಯುಗದಲ್ಲೂ) ಯಾವ ಮಂತ್ರಗಳ ವೀರ್ಯವು (ಪ್ರಭಾವವು) ಉದ್ದೀಪ್ತವಾಗಿದೆಯೋ (ಪ್ರಜ್ವಲಿಸುತ್ತಿದೆಯೋ) ಅಂಥಾ ಎಪ್ಪತ್ತೆರಡು ಮಂತ್ರಗಳನ್ನು ಮಾತ್ರ ಇಲ್ಲಿ (ಈ ನಾಲ್ಕನೇ ಅಧ್ಯಾಯದಲ್ಲಿ) ನಿರೂಪಣೆ ಮಾಡಿದ್ದೇನೆ (ಮಾಡಲಾಗಿದೆ). ಈ ಎಪ್ಪತ್ತೆರಡು ಮಹಾಮಂತ್ರಗಳನ್ನೇ ದ್ವಾಸಪ್ತತಿಮಹಾಮಂತ್ರಾಃ ಎಂದು ಕರೆಯುತ್ತಾರೆ.

4. ದ್ವ್ಯಾಸಪ್ತತಿಮಹಾಮಂತ್ರಗಳು — ಈ ಎಪ್ಪತ್ತೆರಡು ಮಂತ್ರಗಳಲ್ಲಿ ಮೂವತ್ತನಾಲ್ಕು ಮಂತ್ರಗಳು ಕೇವಲ ವಿಷ್ಣು ಮಂತ್ರಗಳೇ — ಎಂದರೆ ವಿಷ್ಣುವಿನ ನಾನಾ ರೂಪಗಳಾದ ವರಾಹ, ಹಂಸ, ನರಸಿಂಹ, ವಾಮನ, ರಾಮಕೃಷ್ಣಾದಿ ರೂಪಗಳ ಮಂತ್ರಗಳೇ ಆಗಿವೆ. ಮೂವತ್ತನಾಲ್ಕರ ಪೈಕಿ ನಾಲ್ಕು ಮಾತ್ರ ಸೂಕ್ತ ಮಂತ್ರಗಳು, ಉಳಿದ ಮೂವತ್ತೆಂಟು ಮಂತ್ರಗಳ ಪೈಕಿ ಲಕ್ಷ್ಮೀ, ಬ್ರಹ್ಮ–ವಾಯು, ರುದ್ರ, ಶೇಷ, ಸೂರ್ಯ, ವಿಘ್ನೇಶ್ವರಾದಿ ಮಂತ್ರಗಳೆಲ್ಲವೂ ಸೇರಿವೆ.

5. ವ್ಯಾಸ–ಕೃಷ್ಣ ಮಂತ್ರಗಳು — ಹೀಗೆ ಕಲಿಯುಗದಲ್ಲೂ ಮಹಾ ಪ್ರಭಾವಶಾಲಿಗಳಾಗಿರುವ ಮಂತ್ರಗಳು ಎಪ್ಪತ್ತೆರಡು ಇದ್ದರೂ ಅವುಗಳಲ್ಲೂ — ಆ ಎಪ್ಪತ್ತೆರಡು ಮಂತ್ರಗಳಲ್ಲೂ — ವಿಶೇಷವಾಗಿ

ವಾಸಿಷ್ಠ–ವೃಷ್ಣಿ–ಪ್ರವರ — ಮಂತ್ರಾಸ್ತತ್ರಾಪಿ ವೀರ್ಯದಾಃ (೪ | ೪೭)

(ಅರ್ಥ) ವಾಸಿಷ್ಠ ಪ್ರವರ–ವಸಿಷ್ಠಗೋತ್ರದವರಲ್ಲಿ ಅತ್ಯಂತ ಶ್ರೇಷ್ಠರಾದ ವೇದವ್ಯಾಸರ ಮಂತ್ರಗಳೂ, ವೃಷ್ಣಿ–ಪ್ರವರ–ಯದುಕುಲ ಶ್ರೇಷ್ಠನಾದ ಶ್ರೀಕೃಷ್ಣನ ಮಂತ್ರಗಳೂ ಅತ್ಯಂತ ಬಲಿಷ್ಠವಾದುವು ಎಂದು ಹೇಳುತ್ತಾರೆ. ಮೂರು ವೇದವ್ಯಾಸ ಮಂತ್ರಗಳನ್ನು ಆಚಾರ್ಯರು ಹೇಳಿದ್ದರೂ ಅವು ಹೆಚ್ಚು ಅನುಷ್ಠಾನದಲ್ಲಿ ಕಂಡುಬರುವುದಿಲ್ಲ. ಕೃಷ್ಣನ ಮೂರು ಮಂತ್ರಗಳಲ್ಲಿ ಕೃಷ್ಣಷಡಕ್ಷರಮಂತ್ರವೇ ಹೆಚ್ಚು ಪ್ರಸಿದ್ಧಿಗೆ ಬಂದಿದೆ. ಇದನ್ನು ವಿಶೇಷವಾಗಿ ಹೆಂಗಸರಿಗೂ ಉಪದೇಶಿಸುವುದು ವಾಡಿಕೆಯಾಗಿದೆ.

6. ಅಷ್ಟಮಹಾಮಂತ್ರಗಳು ಯಾವುವು? —ಪ್ರಣವ ಮಂತ್ರವೆಂಬ ಓಂಕಾರ ಮಂತ್ರವೇ ಮೊದಲನೆಯದು. ಮೂಲಮಂತ್ರವೆಂಬ ನಾರಾಯಣಾಷ್ಟಾಕ್ಷರ ಮಂತ್ರವೇ ಎರಡನೆಯದು. ಭೂಃ ಭುವಃ ಸ್ವಃ ಭೂರ್ಭುವಸ್ಸುವಃ ಎಂಬುವಕ್ಕೆ ನಾಲ್ಕು ವ್ಯಾಹೃತಿಗಳೆಂದು ಹೆಸರು. ಈ ನಾಲ್ಕನ್ನು ಸೇರಿಸಿದರೆ ಒಟ್ಟು ಎಂಟು ಅಕ್ಷರಗಳಾಗುತ್ತವೆ; ಅದೇ ಮೂರನೆಯ ಅಷ್ಟಾಕ್ಷರ ವ್ಯಾಹೃತಿ ಮಹಾಮಂತ್ರ. ನಾಲ್ಕನೆಯದೇ ವಾಸುದೇವದ್ವಾದಶಾಕ್ಷರ ಮಹಾಮಂತ್ರ. ಐದನೆಯದೇ ಬ್ರಹ್ಮಗಾಯತ್ರೀ ಮಹಾಮಂತ್ರವೆಂಬುದು. ಸಂಧ್ಯಾಗಾಯತ್ರಿಯಲ್ಲಿ ಓಂಕಾರವನ್ನೂ ಭೂಃ ಭುವಃ ಸ್ವಃ ಎಂಬ ಮೂರು ವ್ಯಾಹೃತಿಗಳನ್ನು ಸೇರಿಸಿ ಪಂಚಪಾದವಾಗಿ ಜಪಿಸುತ್ತೇವೆ. ಆದರೆ ಬ್ರಹ್ಮಗಾಯತ್ರೀಮಂತ್ರದಲ್ಲಿ ತತ್ಸವಿತುಃ ಎಂದು ಆರಂಭವಾಗುವ ಇಪ್ಪತ್ತನಾಲ್ಕು ಅಕ್ಷರಗಳು ಮಾತ್ರವೇ ಇರುತ್ತವೆ. ಮಾತೃಕಾಮಾಲಾಮಂತ್ರವೆಂಬುದೇ ಆರನೆಯ ಮಹಾಮಂತ್ರ. ಇದರಲ್ಲಿ ಅಕಾರದಿಂದ ಹಿಡಿದು ಳ ಕ್ಷವರೆಗೆ ಇರುವ ಐವತ್ತೊಂದು ವರ್ಣಗಳಿಗೆ ವಾಚ್ಯರಾದ ಅಜಾದಿ ಐವತ್ತೊಂದು ಮೂರ್ತಿಗಳನ್ನೇ ಸ್ಮರಿಸುತ್ತೇವೆ. ಪುರುಷಸೂಕ್ತಮಂತ್ರವೇ ಏಳನೆಯ ಮಹಾಮಂತ್ರ, ವಿಷ್ಣವೇ ನಮಃ ಎಂಬ ವಿಷ್ಣುಷಡಕ್ಷರ ಮಹಾಮಂತ್ರವೇ ಎಂಟನೆಯ ಮತ್ತು ಕಡೆಯ ಮಹಾಮಂತ್ರ.

ಅಷ್ಟ ಮಹಾಮಂತ್ರಗಳ ಮಹಿಮೆ — ಈ ಎಂಟು ಮಹಾಮಂತ್ರಗಳನ್ನೂ ಇದೇ ಕ್ರಮದಲ್ಲೇ ಜಪಮಾಡಬೇಕೆಂದು ಶ್ರೀಮದಾಚಾರ್ಯರು ಅವುಗಳ ಉತ್ಪತ್ತಿಯನ್ನು ತೋರಿಸುತ್ತಾ ಹೇಳಿದ್ದಾರೆ. ಅದನ್ನೇ ಜಪ ಸಂದರ್ಭದಲ್ಲಿ ಹೇಳಿಕೊಳ್ಳುವ ಈ ಶ್ಲೋಕ ತಿಳಿಸುತ್ತದೆ —

ಪ್ರಣವೋಽಷ್ಟೌ ವ್ಯಾಹೃತಯೋ ದ್ವಿಷಟ್–ಸಾವಿತ್ರ–ಮಾತೃಕಾಃ
ಪೌರುಷೋ ವೈಷ್ಣವಶ್ಚೇತಿ ಜಪೇ ಕ್ರಮ ಉದಾಹೃತಃ

೧. ಪ್ರಣವ ಮಂತ್ರ ಅಥವಾ ಓಂಕಾರ ಮಂತ್ರ, ೨. ನಾರಾಯಣಾಷ್ಟಾಕ್ಷರ ಮಂತ್ರ, ೩. ವ್ಯಾಹೃತಿಮಂತ್ರ, ೪. ವಾಸುದೇವದ್ವಾದಶಾಕ್ಷರ ಮಂತ್ರ (ದ್ವಿ-ಷಟ್ = ಹನ್ನೆರಡು) ೫. ಸಾವಿತ್ರ ಎಂದರೆ ಬೃಹ್ಮಗಾಯತ್ರೀ ಮಂತ್ರ, ೬. ಮಾತೃಕಾಮಾಲಾಮಹಾಮಂತ್ರ, ೭. ಪುರುಷಸೂಕ್ತಮಂತ್ರ ಮತ್ತು ೮. ವಿಷ್ಣುಷಡಕ್ಷರ ಮಂತ್ರ ಈ ಕ್ರಮದಲ್ಲೇ ಜಪಮಾಡಬೇಕು. ಈ ಎಂಟು ಮಂತ್ರಗಳೇ ಸಪ್ತಕೋಟಿ ಮಹಾಮಂತ್ರಗಳಿಗೂ ಮೂಲಭೂತವಾದುವೆಂದು ಶ್ರೀಮದಾಚಾರ್ಯರು ತಂತ್ರಸಾರದ ಪ್ರಥಮಾಧ್ಯಾಯದಲ್ಲಿ (ಶ್ಲೋ. ೪೭-೪೮) ಹೇಳಿದ್ದಾರೆ —

ಏತೇ ತು ಸರ್ವಮಂತ್ರಾಣಾಂ ಮೂಲಮಂತ್ರಾ ವಿಶೇಷತಃ
ಏತದ್‌ಜ್ಞಾನಾತ್ ಸಮಸ್ತಂ ಚ ಜ್ಞಾತಂ ಸ್ಯಾಚ್ಛಬ್ದಗೋಚರಮ್
ಏತಜ್ಜಪಾತ್ ಸಮಸ್ತಾನಾಂ ಮಂತ್ರಾಣಾಂ ಜಾಪಕೋ ಭವೇತ್

(ಅರ್ಥ) ಈ ಅಷ್ಟ ಮಹಾಮಂತ್ರಗಳೇ ಏಳು ಕೋಟಿ ಮಹಾಮಂತ್ರಗಳಿಗೂ ಮೂಲಾಧಾರಭೂತವಾದ ಮಂತ್ರಗಳು. ಆದ್ದರಿಂದ ಈ ಎಂಟು ಮಂತ್ರಗಳ ಅರ್ಥವನ್ನು ತಿಳಿದುಕೊಂಡರೆ ಸಮಸ್ತವಾದ ವೇದೇತಿಹಾಸ ಪುರಾಣಾದಿ ಸಕಲಶಾಸ್ತ್ರವಾಙ್ಮಯವನ್ನೂ ತಿಳಿದಂತೆಯೇ ಆಗುತ್ತದೆ. ಅಲ್ಲದೆ, ಈ ಎಂಟೇ ಸಕಲ ಮಂತ್ರಗಳಿಗೂ ಆಧಾರಭೂತವಾಗಿರುವುದರಿಂದ ಈ ಎಂಟು ಮಂತ್ರಗಳನ್ನು ಜಪಿಸಿದರೆ ಸಪ್ತಕೋಟಿ ಮಂತ್ರಗಳನ್ನು ಜಪಿಸಿದಂತೆಯೇ ಆಗುತ್ತದೆ — ಎಂದು ಹೇಳಿದ್ದಾರೆ.

## ಹಂಸ ಮಂತ್ರ

7. ಹಂಸ ಮಂತ್ರ — ಆದರೆ ಈ ಅಷ್ಟಮಹಾಮಂತ್ರಗಳನ್ನು ಜಪಿಸುವುದಕ್ಕೆ ಪೂರ್ವದಲ್ಲೇ (ಮೊದಲೇ) ಹಂಸಷಡಕ್ಷರಮಂತ್ರವನ್ನು ಜಪಿಸುವುದು ಪರಂಪರಾಗತವಾಗಿ ರೂಢಿಯಲ್ಲಿ ಬಂದಿದೆ. ಏಕೆಂದರೆ ಮುಖ್ಯಪ್ರಾಣದೇವರು ನಮ್ಮಲ್ಲಿ ನಿಂತು ಪ್ರತಿನಿತ್ಯ ಇಪ್ಪತ್ತೊಂದು ಸಾವಿರದ ಆರುನೂರು ಹಂಸಮಂತ್ರಗಳನ್ನು ಜಪಿಸುತ್ತಿರುತ್ತಾರೆ. ಆದರಿಂದಲೇ ನಾವು ಬದುಕಿರುವುದು.

ಆದ್ದರಿಂದ ಪ್ರತಿನಿತ್ಯ ಪ್ರಾಣದೇವರ ಪ್ರೇರಣೆಯಿಂದಲೇ ನಾವು ಉಸಿರಾಡುತ್ತಿರುವುದರಿಂದ ಜಪಾರಂಭಕ್ಕೆ ಮುಂಚೆ ಆ ಶ್ವಾಸರೂಪ ಜಪವನ್ನು ಭಗವಂತನಲ್ಲಿ ಸಮರ್ಪಿಸುವುದು ನಮ್ಮ ಆದ್ಯ ಕರ್ತವ್ಯವಾಗಿರುತ್ತದೆ. ಹೀಗೆ ಸಮರ್ಪಿಸುವುದೇ ಹಂಸಮಂತ್ರವೆನಿಸುತ್ತದೆ. ಹಂಸಮಂತ್ರ ಸಮರ್ಪಣೆಯನ್ನು ಗಂಡಸರು ಹೆಂಗಸರು, ಪಂಡಿತರು ಪಾಮರರು ಎಲ್ಲರೂ ಮಾಡಲೇಬೇಕೆಂದು ಆಚಾರ್ಯರು ಹೇಳಿದ್ದನ್ನೇ ಜಗನ್ನಾಥದಾಸರು ಹರಿಕಥಾಮೃತಸಾರದಲ್ಲೂ, ಶ್ವಾಸಸಂಧಿಯಲ್ಲಿ (೧೫ನೇ ಸಂಧಿಯಲ್ಲಿ) ಹೇಳಿದ್ದಾರೆ —

> ಶ್ವಾಸರೂಪೋ ಜಪೋ ನಿತ್ಯಂ ಉಭಯೋರ್ ವಿದ್ವದಜ್ಞಯೋಃ
> ಏಕವಿಂಶತ್ ಸಹಸ್ರಾತ್ಮಾ ಸಷಟ್‌ಶತಮಹರ್ನಿಶಮ್ ೨೫
> ಅರ್ಪಣೀಯೋ ಹರೌ ನಿತ್ಯಂ ಪ್ರಾತರ್ಯೋಗೋ ಮಹಾನಯಮ್

(ಅರ್ಥ) ಪ್ರತಿನಿತ್ಯ ಹಗಲು-ರಾತ್ರಿ ಮುಖ್ಯಪ್ರಾಣದೇವರ ಪ್ರೇರಣೆಯಿಂದ ನಾವು ಮಾಡುವ ಇಪ್ಪತ್ತೊಂದು ಸಾವಿರದ ಆರುನೂರು ಶ್ವಾಸರೂಪ ಜಪವನ್ನು ಬೆಳಗ್ಗೆ ಶ್ರೀಪರಮಾತ್ಮನಲ್ಲಿ ಸಮರ್ಪಿಸಬೇಕು — ಗಂಡಸರೂ ಹೆಂಗಸರೂ ವಿದ್ವಾಂಸರಾಗಿರಲಿ — ಪಾಮರನಾಗಿರಲಿ ಎಲ್ಲರೂ ಸಮರ್ಪಿಸಬೇಕು. ಇದು ದೊಡ್ಡದಾದ ಪ್ರಾತರ್ಯೋಗವಾಗಿದೆ. ಆದ್ದರಿಂದ ಪ್ರಣವಮಂತ್ರಕ್ಕೆ ಮೊದಲು ಹಂಸಷಡಕ್ಷರ ಮಂತ್ರಜಪವನ್ನು ಮಾಡಬೇಕು.

**8.** ಹಂಸಮಂತ್ರೋದ್ಧಾರ — ಹಂಸಮಂತ್ರದಲ್ಲಿ ಆರು ಅಕ್ಷರಗಳಿದ್ದು ಎರಡೆರಡು ವರ್ಣಗಳ ಮೂರು ಮಂತ್ರಗಳಿವೆ. ಅವನ್ನು ತಂತ್ರಸಾರದಲ್ಲಿ ನಾಲ್ಕನೇ ಅಧ್ಯಾಯದಲ್ಲಿ (೨೨—೨೪ ಶ್ಲೋ) ಹೀಗೆ ಉದ್ಧರಿಸಿದ್ದಾರೆ —

> ವಿಯತ್ ಸ ಇತಿ ಯುಗ್ಮಾರ್ಣೋ ವಿಪರೀತಶ್ಚ ಸ ಸ್ಮೃತಃ ೨೨
> ಸಃ ಸರ್ಗಹೀನೋ ವೇತಶ್ಚ ಬಿಂದುಹೀನೋತ್ತರಸ್ತಥಾ
> ತ್ರಯ ಏತೇ ಮಹಾಮಂತ್ರಾಃ ಪುರುಷಾರ್ಥಚತುಷ್ಟಯೇ ೨೩
> ಕಲ್ಪವೃಕ್ಷಾಃ ಪ್ರಿಯಾ ವಿಷ್ಣೋರ್ ವಿಶೇಷಜ್ಞಾನದಾಯಕಾಃ

(ಅರ್ಥ) (ಒಂದನೇ ಮಂತ್ರೋದ್ಧಾರ) ವಿಯತ್ ಎಂದರೆ ಆಕಾಶ. 'ವಿಯದ್ ವಿಷ್ಣುಪದಂ ವಾಪಿ ಪುಂಸ್ಯಾಕಾಶ ವಿಹಾಯಸೀ' ಎಂದು ಅಮರ. ಇದು ಆಕಾಶಬೀಜಕ್ಕೆ ಸಂಕೇತ. ಹಕಾರವು ಆಕಾಶ ಬೀಜಮಂತ್ರ. ಬೀಜಮಂತ್ರಗಳು ಸದಾ ಬಿಂದುವಿನಿಂದ ಕೂಡಿರುತ್ತವೆ; ವಿಯತ್ ಎಂದರೆ ಆಕಾಶ ಬೀಜಮಂತ್ರವಾದ ಹಂ ಎಂದರ್ಥಮಾಡಿಕೊಳ್ಳಬೇಕು. ಅದರ ಮುಂದೆ 'ಸ ಇತಿ' ಸಃ ಎಂಬ ವರ್ಣವನ್ನು ಸೇರಿಸಬೇಕು — ಆಗ ಹಂಸಃ ಎಂದಾಗುತ್ತದೆ; ಹೀಗೆ ರೂಪವಾದ ಯುಗ್ಮಾರ್ಣಃ ಎರಡು ಅಕ್ಷರದ ಮಂತ್ರವೇ ಮೊದಲನೆಯ ಮಂತ್ರ. ಎರಡನೆಯ ಮಂತ್ರವು 'ವಿಪರೀತಶ್ಚ ಸಃ' ಅದೇ ಹಂಸಃ ಎಂಬುದು ತಲೆಕೆಳಕಾದುದು ಅಥವಾ

ಹಿಂದು-ಮುಂದಾದ್ದು ಎಂದರೆ ಸಃ ಹಂ; ಇದು ಸಂಧಿಯಾದರೆ 'ಸೋಹಂ' ಎಂದಾಗುತ್ತದೆ ಇದೇ 'ಸ್ಮೃತಃ' ಎರಡನೆಯ ಮಂತ್ರವೆಂದು ಹೇಳಲ್ಪಡುತ್ತದೆ. ಇದೂ 'ಯುಗ್ಮಾರ್ಣಃ' ಎರಡೇ ಅಕ್ಷರದ ಮಂತ್ರ. ಮೂರನೇ ಮಂತ್ರವನ್ನು ಉದ್ಧರಿಸುತ್ತಾರೆ — 'ಸಃ' ಆದು ಎಂದರೆ 'ಸಃ' ಎಂಬುದು 'ಸರ್ಗಹೀನಃ' ವಿಸರ್ಗರಹಿತವಾಗಿ ಎಂದರೆ ಸ ಎಂದಾಗಿ, 'ವೇತಶ್ಚ'-ವಕಾರದೊಡನೆ (ಇತ-ಕೂಡಿದ, ಸೇರಿದ) ಸೇರಿದರೆ ಸ್ವ ಎಂದಾಗುತ್ತದೆ; ಇದನ್ನು ದೀರ್ಘವೂ ಮಾಡಿಕೊಳ್ಳಬೇಕು — ಆಗ ಸ್ವಾ ಎಂದಾಗುತ್ತದೆ. ಇದರ ಜೊತೆ ಎರಡನೆಯ 'ಹಂ' ಎಂಬುದು 'ಬಿಂದು ಹೀನೋತ್ತರಃ' ಬಿಂದುರಹಿತವೂ ಆಗಿ, ತಥಾ ಹಾಗೆಯೇ ಆಕಾರಾಂತವಾಗಿಯೂ ಇರುವ 'ಹಾ' ಎಂಬುದರೊಡನೆ ಸೇರಿದರೆ 'ಸ್ವಾಹಾ' ಎಂದಾಗುತ್ತದೆ. ಇದೂ 'ಯುಗ್ಮಾರ್ಣಾಃ' ಎರಡು ವರ್ಣಗಳ ಮಂತ್ರ. ಹೀಗೆ ಹಂಸಃ ಸೋಹಂ ಸ್ವಾಹಾ ಎಂದು ಮೂರು ಮಂತ್ರಗಳಾದುವು. 'ತ್ರಯಃ ಏತೇ ಮಹಾಮಂತ್ರಾಃ' ಈ ಮೂರೂ ಮಹಾಮಂತ್ರಗಳು. ಇದನ್ನು ಮುಖ್ಯ ಪ್ರಾಣದೇವರೇ ಸಕಲ ಪ್ರಾಣಿಗಳಲ್ಲಿ ನಿಂತು ಜಪಮಾಡುವುದರಿಂದ 'ಮಹಾಮಂತ್ರ'ಗಳೆನಿಸುತ್ತವೆ. ಈ ಮೂರೂ 'ಪುರುಷಾರ್ಥ-ಚತುಷ್ಟಯೇ' — ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ವಿಷಯದಲ್ಲಿ, 'ಕಲ್ಪವೃಕ್ಷಾಃ'-ಕಲ್ಪವೃಕ್ಷದಂತಿವೆ. ಪ್ರಿಯಾಃ ವಿಷ್ಣೋಃ ವಿಷ್ಣುವಿಗೆ ಬಹಳ ಪ್ರಿಯವಾದುವು. 'ವಿಶೇಷಜ್ಞಾನದಾಯಕಾಃ = ಅತ್ಯಧಿಕವಾಗಿ ಜ್ಞಾನವನ್ನೂ ಕೊಡುವುವು, ಅಥವಾ 'ವಿಶೇಷಜ್ಞಾನ' ಎಂದರೆ ಭಗವದಪರೋಕ್ಷಜ್ಞಾನವನ್ನೂ ಕೊಡತಕ್ಕವು ಎಂದು ಹೇಳುತ್ತಾರೆ.

**9. ನ್ಯಾಸವಿಧಿ** — ಈ ಮಂತ್ರಗಳನ್ನು ಸೇರಿಸಿದರೆ 'ಹಂಸಃ ಸೋಹಂ ಸ್ವಾಹಾ' ಎಂದು ಮಾಲಾಮಂತ್ರವಾಗುತ್ತದೆ. ಇದಕ್ಕೆ ಜಪಮಾಡಲು ಅಂಗನ್ಯಾಸ-ಕರನ್ಯಾಸಗಳನ್ನೂ ಅಲ್ಲೇ ಮುಂದೆ ಹೇಳಿದ್ದಾರೆ —

**ತ್ರೈರೇವ ತು ದ್ವಿರಾವೃತ್ತ್ಯೈ-ರಂಗಮೇಷಾಂ ಪ್ರಕೀರ್ತಿತಮ್** ೨೪

(ಅರ್ಥ) ತ್ರೈಃಏವ ತು-ಆ ಮೂರು ಮಂತ್ರಗಳಿಂದಲೇ, ದ್ವಿಃ ಆವೃತ್ತ್ಯೈಃ = ಎರಡಾವರ್ತಿ ಹೇಳಿಕೊಂಡರೆ, ಏಷಾಂ-ಇವುಗಳಿಗೆ, ಅಂಗಂ ಪ್ರಕೀರ್ತಿತಮ್-ಕರನ್ಯಾಸ-ಅಂಗನ್ಯಾಸ ಮಂತ್ರಗಳಾಗುತ್ತವೆ — ಹೇಗೆಂದರೆ — ಓಂ ಹಂಸಃ (ಅಂಗುಷ್ಠಾಭ್ಯಾಂ ನಮಃ) ಹೃದಯಾಯ ನಮಃ| ಓಂ ಸೋಹಂ(ತರ್ಜನೀಭ್ಯಾಂ ನಮಃ) ಶಿರಸೇ ಸ್ವಾಹಾ| ಓಂ ಸ್ವಾಹಾ (ಮಧ್ಯಮಾಭ್ಯಾಂ ನಮಃ) ಶಿಖಾಯೈ ವಷಟ್. ಹೀಗೆಯೇ ಇನ್ನೊಂದು ಸಾರಿ ಹೇಳಿಕೊಂಡು ಕರನ್ಯಾಸ-ಅಂಗನ್ಯಾಸಗಳನ್ನು ಮಾಡಬೇಕು. ಅದನ್ನು ಅನುಷ್ಠಾನ ಕ್ರಮದಲ್ಲಿ ತೋರಿಸಿದ್ದೇವೆ.

**10. ವರ್ಣನ್ಯಾಸ ವಿಧಾನ** — ಶ್ರೀಮದಾಚಾರ್ಯರು ತಂತ್ರಸಾರದ ನಾಲ್ಕನೇ ಅಧ್ಯಾಯದಲ್ಲಿ ಎಲ್ಲ ಮಂತ್ರಗಳನ್ನೂ ಉದ್ಧರಿಸಿದ ಬಳಿಕ ಪ್ರತಿಯೊಂದು ಮಂತ್ರಕ್ಕೂ ವರ್ಣನ್ಯಾಸ ಮಾಡಲೇಬೇಕೆಂಬ ವಿವಕ್ಷೆಯಿಂದ ಆ ವರ್ಣನ್ಯಾಸವನ್ನು ಸಂಗ್ರಹವಾಗಿ ನಾಲ್ಕೂವರೆ ಶ್ಲೋಕಗಳಲ್ಲಿ ಹೇಳಿದ್ದಾರೆ. ಆದರೂ ಯಾಕೋ ಏನೋ ಯಾವ ಪುಸ್ತಕವೂ ಈ ವರ್ಣನ್ಯಾಸವನ್ನು ಯಾವ ಮಂತ್ರಕ್ಕೂ ಕೊಟ್ಟಿಲ್ಲ. ಆದರೆ ನನಗೆ ನವವೃಂದಾವನದಲ್ಲಿ ಈ ಬಗ್ಗೆ ವಿಶೇಷ ಸೂಚನೆಯಾದ್ದರಿಂದ ನಾನು ಮಾಡುತ್ತಾ ಬಂದಿದ್ದೇನಲ್ಲದೆ ನಾನು ಯಾರಿಗೆ ಹೇಳಿಕೊಟ್ಟರೂ ಇದನ್ನು ಹೇಳಿಕೊಡುತ್ತೇನೆ. ತಂತ್ರಸಾರ ವ್ಯಾಖ್ಯಾನಗಳಲ್ಲಿ ಶ್ರೀರಘೂತ್ತಮಸ್ವಾಮಿಗಳ ಸಾಕ್ಷಾದ್ಗುರುಗಳಾದ ಶ್ರೀ ರಘುವರ್ಯತೀರ್ಥರು ರಚಿಸಿದ ಶ್ಲೋಕಗಳನ್ನು ಕೊಡುತ್ತಾರಾದರೂ ಆ ಕ್ರಮವನ್ನು ಮಾತ್ರ ಕೊಡುವುದಿಲ್ಲ. ಆದರಿಂದ ಕೆಲವರಿಗೆ ಈ ಕ್ರಮ ಹೊಸದಾಗಿ ಕಂಡರೂ ಅವಶ್ಯಾನುಷ್ಠೇಯವೆಂದು ತಿಳಿಯಬೇಕು.

**11. ಆರು ಅಂಗಗಳು** — ತಂತ್ರಸಾರದಲ್ಲಿ ಅಕ್ಷರಗಳ ಸಂಖ್ಯೆಗೆ ಅನುಗುಣವಾಗಿ ಈ ಅಂಗಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕೆಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

ನ್ಯಾಸೋಽಯಂ ಯಥಾಕ್ರಮಂ ಪ್ರೋಕ್ತೋ ಮಂತ್ರೇಷ್ವೇತೇಷು ಕೃತ್ಸ್ನಶಃ

(ಅರ್ಥ) ಈ ಪ್ರಕಾರ ವರ್ಣನ್ಯಾಸವನ್ನು ಪ್ರತಿಯೊಂದು ಮಂತ್ರಕ್ಕೂ (ಕೃತ್ಸ್ನಶಃ) ಆಯಾ ಮಂತ್ರದಲ್ಲಿರುವ ವರ್ಣಸಂಖ್ಯೆಗೆ ಅನುಗುಣವಾಗಿ ಮಾಡಿಕೊಳ್ಳಬೇಕು. ಇಲ್ಲಿ (ತಂತ್ರಸಾರದಲ್ಲಿ) ಅಕ್ಷರಸಂಖ್ಯೆಗೆ ಅನುಸಾರವಾಗಿ ಕ್ರಮ ಕೊಟ್ಟಿದ್ದಾರೆ. ಆದರೆ ಯಾವ ಕ್ರಮದಲ್ಲಿ ಮಾಡಿಕೊಳ್ಳಬೇಕೆಂಬುದನ್ನು ಹೇಳಿಲ್ಲ. ಶ್ರೀ ರಘುವರ್ಯರ ಶ್ಲೋಕಗಳು ಆ ಅನುಷ್ಠಾನಕ್ರಮವನ್ನೇ ತೋರಿಸುತ್ತವೆ. ಈಗ ಆರು ಅಂಗಗಳ ಕ್ರಮ ಯಾವುದೆಂಬುದನ್ನು ತಂತ್ರಸಾರದಲ್ಲಿ (೪೦. ೧೩೪ ಶ್ಲೋ.) ಹೀಗೆ ಹೇಳಿದ್ದಾರೆ —

ಪಾದ–ಹೃತ್–ಕೇಷು ನಾಭ್ಯಾಸ್ಯ — ಯುಕ್ತಂ ಚ ಸಲಲಾಟಕಮ್ ೧೩೪

೧. ಪಾದ, ೨. ಹೃದಯ, ೩. ಕೇಷು (ಶಿರಸ್ಸು)ಗಳಲ್ಲಿ, ೪. ನಾಭಿ, ೫. ಆಸ್ಯ (ವದನ, ಬಾಯಿ) ಮತ್ತು ೬ ಲಲಾಟ (ಹಣೆ– ಅಕ್ಷತೆ ಹಚ್ಚಿಕೊಳ್ಳುವ ಸ್ಥಳ) — ಹೀಗೆ ಆರು ಸ್ಥಳಗಳಲ್ಲಿ ಷಡಕ್ಷರ ಮಂತ್ರಗಳಿಗೆ ವರ್ಣನ್ಯಾಸ ಮಾಡಬೇಕೆಂದು ಅಪ್ಪಣೆ ಕೊಡಿಸಿದರು.

**12. ನ್ಯಾಸದಲ್ಲಿ ಮೂರು ವಿಧ** — ನ್ಯಾಸವು ಸೃಷ್ಟಿಕ್ರಮವೆಂದೂ ಸ್ಥಿತಿಕ್ರಮವೆಂದೂ ಲಯಕ್ರಮವೆಂದೂ ಮೂರು ವಿಧವಾಗಿದೆ. ಅದರ ಪೈಕಿ

ತಂತ್ರಸಾರದಲ್ಲಿ ಹೇಳಿದ ಕ್ರಮಕ್ಕೆ ತಲೆಕೆಳಕಾಗಿ (ಹಿಂದು ಮುಂದಾಗಿ) ಹೋಗುವುದು ಸೃಷ್ಟಿಕ್ರಮವು. ತಂತ್ರಸಾರದಲ್ಲಿ ಹೇಳಿದಂತೆಯೇ ಮಾಡುವುದು ಲಯಕ್ರಮ. ಅರ್ಧ ಸೃಷ್ಟಿಕ್ರಮವನ್ನೂ ಉಳಿದ ಅರ್ಧವನ್ನು ಲಯಕ್ರಮದಲ್ಲೂ ಹೀಗೆ ಸೇರಿಸಿ ಮಾಡುವುದು ಸ್ಥಿತಿಕ್ರಮವೆಂದು ಶ್ರೀಮದಾಚಾರ್ಯರೇ ಹೇಳಿದ್ದಾರೆ —

**ಸೃಷ್ಟಿ–ಸ್ಥಿತಿ–ಲಯ ನ್ಯಾಸಾಃ ಪ್ರಾತಿಲೋಮ್ಯಾನುಲೋಮತಃ (೪ । ೧೨೯)**

(ಅರ್ಥ) ಪ್ರಾತಿಲೋಮ್ಯ–ಈ ಗ್ರಂಥದಲ್ಲಿ ಹೇಳಿದ ಕ್ರಮಕ್ಕೆ ವಿಪರೀತವಾಗಿ (ಹಿಂದು ಮುಂದಾಗಿ) ಮಾಡುವುದು ಸೃಷ್ಟಿಕ್ರಮ. ಅನುಲೋಮತಃ — ಇದರಲ್ಲಿ ಹೇಳಿದಂತೆಯೇ ಮಾಡುವುದು ಲಯಕ್ರಮ ಎನಿಸುತ್ತದೆ. ಪ್ರಾತಿಲೋಮ್ಯ + ಅನುಲೋಮತಃ–ಅರ್ಧವನ್ನು ಹಿಂದು ಮುಂದಾಗಿಯೂ ಇನ್ನು ಅರ್ಧವನ್ನು ಅದೇ ಕ್ರಮದಲ್ಲಿಯೂ ಮಾಡುವುದು ಸ್ಥಿತಿಕ್ರಮ ಎನಿಸುತ್ತದೆ. ಅಲ್ಲದೆ ಪ್ರತಿಯೊಬ್ಬರೂ ಈ ಮೂರು ಕ್ರಮಗಳನ್ನೂ ಮಾಡಿಕೊಳ್ಳುವುದು ಉತ್ತಮ ಪಕ್ಷವೆಂದು ಹೇಳುತ್ತಾರೆ. ಆಚಾರ್ಯರ ಪ್ರಕಾರ —

ಸ್ಥಿತ್ಯಂತಾ ಏವ ವರ್ಣಾನಾಂ ಶ್ರೇಷ್ಠಾ ಏವಂ ಚತುರ್ದಶ
ಸಂಹೃತ್ಯಂತಾ ಮೋಕ್ಷಿಣಾಂ ಚ ಏಕವಿಂಶತಿರೇವ ವಾ (೪ । ೧೩೦)

**13.** ತತ್ವನ್ಯಾಸ — ಮಾತೃಕಾನ್ಯಾಸಗಳಿಗೆ ಈ ಮೂರು ಕ್ರಮ ಇಲ್ಲ — 'ವರ್ಣಾನಾಂ' ಎಂದು ತಂತ್ರಸಾರದಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಸೃಷ್ಟಿ-ಸ್ಥಿತಿ-ಲಯ ಕ್ರಮಗಳು ತತ್ವನ್ಯಾಸ ಮಂತ್ರಗಳಿಗೂ ಮಾತೃಕಾನ್ಯಾಸದ ಮಂತ್ರಗಳಿಗೂ ಅನ್ವಯಿಸುವುದಿಲ್ಲವೆಂದು ಛಲಾರಿ ಟೀಕೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಇನ್ನು ಮಾತೃಕಾನ್ಯಾಸವು ಸರ್ವರಿಗೂ ಒಂದೇ ಕ್ರಮ. ತತ್ವನ್ಯಾಸವೂ ಹಾಗೆಯೇ. ಆದರೆ ಜಪಾರಂಭ ಕಾಲದಲ್ಲಿ ಮೊದಲು ತತ್ವನ್ಯಾಸ ಮಾಡಿಕೊಂಡು ಆಮೇಲೆ ಮಾತೃಕಾನ್ಯಾಸ ಮಾಡಬೇಕು. ಜಪ ಮುಗಿದ ಮೇಲೆ ಮೊದಲು ಮಾತೃಕಾನ್ಯಾಸ ಮಾಡಿ **ಕೊನೆಗೆ** ತತ್ವನ್ಯಾಸ ಮಾಡಿಕೊಳ್ಳಬೇಕು — ಇದು ಬ್ರಹ್ಮಚಾರಿಗಳಿಗೂ ಗೃಹಸ್ಥರಿಗೂ ಅನ್ವಯಿಸುತ್ತದೆ. ಆದರೆ ಯತಿಗಳು ಮಾತ್ರ ಕೊನೆಯಲ್ಲಿ ತತ್ವನ್ಯಾಸ ಮಾಡಿಕೊಳ್ಳುವಾಗ ಲಯಕ್ರಮದಲ್ಲೇ (ಎಂದರೆ ಓಂ ಪರಾಯ ಪೃಥಿವ್ಯಾತ್ಮನೇ ಶನ್ಯೈಶ್ಚರಧರಾಭ್ಯಾಂ ನಮಃ ಎಂದು ಆರಂಭಿಸಿ ಹಿಂದೆ ಹಿಂದಕ್ಕೆ ಹೋಗುತ್ತಾ ಓಂ ಪರಾಯ ಶಕ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ ಎಂದು) ಮುಗಿಸಬೇಕು — ತಥಾ ಚ ಸೃಷ್ಟಿಮಾತೃಕಾನ್ಯಾಸಃ ಸರ್ವೇಷಾ ಮಪಿ ಸಂಹೃತಿತತ್ವನ್ಯಾಸಃ ಸಂನ್ಯಾಸಿನಾಂ (ಏವ), ಸೃಷ್ಟಿತತ್ವನ್ಯಾಸಃ ತದನ್ಯೇಷಾಮಿತಿ ಜ್ಞೇಯಮ್ (ಬೆಳಗಾಂ ಮುದ್ರಿತ ಪುಸ್ತಕದಲ್ಲಿ ಪುಟ ೧೧೪).

**14. ವರ್ಣನ್ಯಾಸಕ್ಕೆ ರಘುವರ್ಯರು ಹೇಳಿದ ಕ್ರಮ** — ಶ್ರೀಮದಾಚಾರ್ಯರು ತಂತ್ರಸಾರದಲ್ಲಿ ಷಡಕ್ಷರ ಮಂತ್ರಗಳಿಗೆ ಆರು ಅಂಗಗಳನ್ನು ಹೇಳಿದರೇ ಆಗಲಿ ಅದರ ಕ್ರಮವನ್ನು ಹೇಳಲಿಲ್ಲ. ಆ ಕ್ರಮವನ್ನು ಶ್ರೀ ರಘುವರ್ಯರು ರಚಿಸಿದ ಈ ಅರ್ಧಶ್ಲೋಕವು ಹೇಳುತ್ತದೆ—

ಅಂಘ್ರಿ—ನಾಭಿ-ಹೃದಾ-ಸ್ಯೇಷು ಲಲಾಟೇ ಕೇ ಷಡಕ್ಷರೇ

(ಅರ್ಥ) ಅಂಘ್ರಿ-ಎರಡು ಪಾದಗಳು. ಹೃತ್-ಹೃದಯ ಆಸ್ಯ-ಬಾಯಿ, (ವದನ), ಕೇ = ಶಿರಸ್ಸಿನಲ್ಲಿ.

ನಾಲ್ಕಕ್ಷರ ಮಂತ್ರಕ್ಕೆ ವರ್ಣಸ್ಥಾನಗಳನ್ನು ಹೇಳುವಾಗ ''ಚತುರ್ವರ್ಣಾಂಸ್ತು ಸಂಹೃತೌ'' ಎಂದು ಹೇಳಿರುವುದು ಉದ್ದಕ್ಕೂ ಅನ್ವಯಿಸುತ್ತದೆ. ಆದ್ದರಿಂದ ಮೇಲೆ ಹೇಳಿರುವ ಕ್ರಮವು ಲಯನ್ಯಾಸದ್ದು ಎಂದು ತಿಳಿಯಬೇಕು. ಆದ್ದರಿಂದ ಹಂಸಷಡಕ್ಷರದ ಆರು ವರ್ಣಗಳನ್ನು ಪಾದ, ನಾಭಿ, ಹೃದಯ, ಬಾಯಿ, ಹಣೆ ಮತ್ತು ಶಿರಸ್ಸುಗಳಲ್ಲಿ ಇಟ್ಟುಕೊಳ್ಳುವುದು ಲಯನ್ಯಾಸ. ಇದಕ್ಕೆ ವ್ಯುತ್ಕ್ರಮದಿಂದ (ಹಿಂದುಮುಂದಾಗಿ) ಶಿರಸ್ಸು, ಲಲಾಟ, ಬಾಯಿ, ಹೃದಯ, ನಾಭಿ, ಪಾದಗಳಲ್ಲಿ ನ್ಯಾಸ ಮಾಡಿಕೊಳ್ಳುವುದು ಸೃಷ್ಟಿನ್ಯಾಸ. ಮೊದಲನೆಯ ಮೂರನ್ನು ಸೃಷ್ಟಿಯಂತೆಯೂ ಕಡೆಯ ಮೂರನ್ನು ಲಯದಂತೆಯೂ ಮಾಡುವುದು ಸ್ಥಿತಿ ಕ್ರಮ — ಹೇಗೆಂದರೆ ಶಿರಸ್ಸು, ಲಲಾಟ, ಬಾಯಿ, ಪಾದ, ನಾಭಿ, ಹೃದಯ. ಈ ಅಂಗಗಳಲ್ಲಿ ಯಾವ ಯಾವ ವರ್ಣಗಳನ್ನು ಹೇಳಬೇಕು, ಯಾವ ಬೆಟ್ಟಿನಿಂದ ನ್ಯಾಸ ಮಾಡಬೇಕೆಂಬ ವಿಚಾರವನ್ನು ಜಪಕ್ರಮದಲ್ಲಿ ತೋರಿಸಲಾಗಿದೆ. ನಾವು ಮೇಲೆ ವಿವರಿಸಿದಂತೆ ಹತ್ತು-ಹದಿನಾಲ್ಕು-ಇಪ್ಪತ್ತೊಂದು ನ್ಯಾಸಗಳನ್ನು ಮಾಡಿಕೊಳ್ಳುವುದು ಅಸಾಧ್ಯವಾದರೂ ನಾಲ್ಕು ನ್ಯಾಸಗಳನ್ನು ಮಾಡಿಕೊಳ್ಳುವುದು ಕಷ್ಟವೇನೂ ಅಲ್ಲವೆಂದು ಅನುಭವ ಹೇಳುತ್ತದೆ. ಆದರೆ ಮಂತ್ರ ಕಂಠಪಾಠ ಆಗುವವರೆಗೆ ಮೊದಲು ಮೂರು — ನಾಲ್ಕು ತಿಂಗಳು ಒಂದೊಂದೇ ನ್ಯಾಸ ಮಾಡಿಕೊಂಡರೆ ಕೃತಾರ್ಥ.

**15. ಅಂಗುಲಿ ನ್ಯಾಸ** — ಮಂತ್ರದ ಆರು ವರ್ಣಗಳನ್ನು ಆರು ಅಂಗಗಳಲ್ಲಿ ನ್ಯಾಸ ಮಾಡಿಕೊಂಡಂತೆಯೇ ಎರಡು ಕೈಗಳ ಬೆಟ್ಟುಗಳಲ್ಲೂ ನ್ಯಾಸ ಮಾಡಿಕೊಳ್ಳಬಹುದು; ಇದಕ್ಕೆ 'ಅಂಗುಲಿನ್ಯಾಸ' ಎಂದು ಹೆಸರು. ಆದರೆ ಯಾವ ಪುಸ್ತಕದಲ್ಲೂ ಈ ಕ್ರಮವನ್ನೂ ಕೊಟ್ಟಿಲ್ಲ. ಇರಲಿ. ಹಂಸ ಷಡಕ್ಷರ ಮಂತ್ರದಲ್ಲಿ ಆರು ವರ್ಣಗಳಿವೆ. ನಮ್ಮ ಎರಡು ಕೈಗಳಲ್ಲಿ (ಹೆಬ್ಬೆಟ್ಟು ಬಿಟ್ಟು) ಎಂಟು ಬೆಟ್ಟುಗಳಿವೆ. ಆದ್ದರಿಂದ ಎರಡಾವರ್ತಿ — ಮೊದಲು-ಕೊನೆಯಲ್ಲಿ — ಇಡೀ ಮಂತ್ರದಿಂದ ನ್ಯಾಸ ಮಾಡಿಕೊಂಡು ಒಂದೊಂದು ವರ್ಣದಿಂದ ಮಿಕ್ಕ ಬೆಟ್ಟುಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕು. 'ಓಂ ಹಂಸಃ ಸೋಹಂ ಸ್ವಾಹಾ ಓಂ' ಎಂದು

ಹೇಳಿಕೊಂಡು ಹೆಬ್ಬೆಟ್ಟಿನಿಂದ ತರ್ಜನ್ಯಾದಿ ಬೆಟ್ಟುಗಳನ್ನು ಮುಟ್ಟಿಕೊಳ್ಳಬೇಕು — ಇದೇ ಅಂಗುಲಿನ್ಯಾಸ. ಇದರಲ್ಲೂ ಸೃಷ್ಟಿ–ಸ್ಥಿತಿ–ಲಯ ಕ್ರಮಗಳಿವೆ. ಬ್ರಹ್ಮಚಾರಿಗಳು ಸೃಷ್ಟಿ ಕ್ರಮದಲ್ಲೂ, ಗೃಹಸ್ಥರು ಸ್ಥಿತಿ ಕ್ರಮದಲ್ಲೂ, ಯತಿಗಳು ಲಯಕ್ರಮದಲ್ಲೂ ಮಾಡಿಕೊಳ್ಳಬೇಕು. ಈ ಪುಸ್ತಕದಲ್ಲಿ ಸೃಷ್ಟಿ-ಸ್ಥಿತಿ ಕ್ರಮಗಳನ್ನು ಮಾತ್ರ ಮುಂದೆ 'ಜಪವಿಧಿ'ಯಲ್ಲಿ ತೋರಿಸಲಾಗಿದೆ.

**16. ಋಷ್ಯಾದಿ ವಿಚಾರ:** — ಅಂಗುಲಿ ನ್ಯಾಸ ಆದಮೇಲೆ ಋಷ್ಯಾದಿನ್ಯಾಸ ಮಾಡಿಕೊಳ್ಳಬೇಕು. ತಂತ್ರಸಾರದಲ್ಲಿ (೪ ಅ. ೭ ಶ್ಲೋ.) ಸಕಲ ವೈಷ್ಣವ ಮಂತ್ರಗಳಿಗೂ ಋಷಿ, ದೇವತೆ, ಛಂದಸ್ಸಿನ ವಿಚಾರವನ್ನು ಸಂಗ್ರಹವಾಗಿ ಹೀಗೆ ಅಪ್ಪಣೆ ಕೊಡಿಸಿದ್ದಾರೆ —

> ವೈಷ್ಣವಾನಾಂ ಮುನಿರ್ಬ್ರಹ್ಮಾ ಮಂತ್ರಾಣಾಂ ವರ್ಣಭೇದತಃ
> ಜ್ಞೇಯಂ ಛಂದೋ ದೇವತೈಕಸ್ ತತ್ತದ್ರೂಪೋ ಹರಿಃ ಪರಃ

(ಅರ್ಥ) ಈ ನಾಲ್ಕನೇ ಅಧ್ಯಾಯದಲ್ಲಿ ನಿರೂಪಣೆ ಮಾಡಿರುವ ವರಾಹ, ನರಸಿಂಹ, ವಾಮನ, ರಾಮ, ಕೃಷ್ಣ, ವೇದವ್ಯಾಸಾದಿ ಸಕಲ ವಿಷ್ಣು ಮಂತ್ರಗಳಿಗೂ ಬ್ರಹ್ಮದೇವರೇ (ಚತುರ್ಮುಖ ಬ್ರಹ್ಮದೇವರೇ) ಋಷಿಗಳೆಂದು ತಿಳಿಯಬೇಕು. ಏಕೆಂದರೆ ತಂತ್ರಸಾರದ ಪ್ರಾರಂಭದಲ್ಲಿ (೧ ಅ. ೨ ಶ್ಲೋ.) ಹೇಳಿರುವಂತೆ ಸೃಷ್ಟಿಯ ಪ್ರಾರಂಭ ಕಾಲದಲ್ಲಿ ಬ್ರಹ್ಮದೇವರಿಂದ ಪ್ರಾರ್ಥಿಸಲ್ಪಟ್ಟ ನಾರಾಯಣದೇವರು ಇಡೀ ತಂತ್ರಸಾರವನ್ನೂ ಅದರಲ್ಲಿ ಹೇಳಿರುವ ಸಕಲ ಮಂತ್ರಗಳನ್ನೂ (ವಿಶೇಷತಃ ವಿಷ್ಣು ಮಂತ್ರಗಳನ್ನೂ) ಮೊಟ್ಟಮೊದಲು ಆ ಬ್ರಹ್ಮದೇವರಿಗೇ ಉಪದೇಶಿಸಿದರು, ಹೀಗೆ ಈ ಸಕಲ ವಿಷ್ಣು ಮಂತ್ರಗಳನ್ನು ಮೊದಲು ಕಂಡವರು ಮತ್ತು ಅನುಷ್ಠಾನ ಮಾಡಿದವರು ಬ್ರಹ್ಮದೇವರೇ ಆದ್ದರಿಂದ ಅವರೇ ಋಷಿಗಳು. ಮಂತ್ರದಲ್ಲಿರುವ ಅಕ್ಷರಗಳನ್ನು ನೋಡಿಕೊಂಡು ಛಂದಸ್ಸನ್ನು ನಿರ್ಣಯಿಸಬೇಕು — ಆರು ಅಥವಾ ಎಂಟು ಅಕ್ಷರಗಳಿದ್ದರೆ ಗಾಯತ್ರೀ ಛಂದಸ್ಸು, ಹನ್ನೊಂದಿದ್ದರೆ ತ್ರಿಷ್ಟುಪ್, ಹನ್ನೆರಡಿದ್ದರೆ ಜಗತೀ, ಇಪ್ಪತ್ತನಾಲ್ಕಿದ್ದರೆ ಗಾಯತ್ರೀ, ಮೂವತ್ತೆರಡಿದ್ದರೆ ಅನುಷ್ಟುಪ್ ಇತ್ಯಾದಿ ರೀತಿಯಾಗಿ ತಿಳಿಯಬೇಕು ಮತ್ತು ಸಕಲ ವಿಷ್ಣು ಮಂತ್ರಗಳಿಗೂ ಆಯಾ ರೂಪಿ ಶ್ರೀಹರಿಯೇ ದೇವತೆ — ವರಾಹ ಮಂತ್ರಗಳಿಗೆ ವರಾಹನೂ, ನರಸಿಂಹ ಮಂತ್ರಗಳಿಗೆ ನರಸಿಂಹನೂ, ರಾಮಮಂತ್ರಗಳಿಗೆ ಶ್ರೀರಾಮ, ಶ್ರೀಕೃಷ್ಣಮಂತ್ರಗಳಿಗೆ ಶ್ರೀಕೃಷ್ಣ ಇತ್ಯಾದಿ ರೀತಿಯಾಗಿ ತಿಳಿಯಬೇಕು ಎಂದು ಸಾಮಾನ್ಯವಾಗಿ ಹೇಳಿದ್ದಾರೆ.

ಆದರಿಂದ ಈ ಹಂಸಮಂತ್ರಕ್ಕೆ ಚತುರ್ಮುಖ ಬ್ರಹ್ಮನೇ ಋಷಿ. ಆರು ಅಕ್ಷರಗಳಿರುವುದರಿಂದ ಗಾಯತ್ರೀ ಛಂದಸ್ಸೆಂದೂ ಹಂಸರೂಪಿ ಪರಮಾತ್ಮನೇ (ಅಥವಾ ಹಂಸರೂಪಿ ನಾರಾಯಣನೇ) ದೇವತೆ ಎಂದೂ ತಿಳಿಯಬೇಕು. ಜಪ ಆರಂಭಿಸುವಾಗ — 'ಯಥಾ ಶಕ್ತಿ ಜಪೇ ವಿನಿಯೋಗಃ' ಎಂದೂ ಮುಗಿಸುವಾಗ

'ಯಥಾಶಕ್ತಿಜಪೋಪಸಂಹಾರೇ ವಿನಿಯೋಗಃ' ಎಂದೂ ಹೇಳಿಕೊಳ್ಳಬೇಕು. ಈ ವಿಚಾರ ಇಷ್ಟು ಸಣ್ಣದಾದರೂ ಯಾವ ಪುಸ್ತಕವೂ ಇದನ್ನು ಸೂಚಿಸುವುದಿಲ್ಲ — 'ಜಪೇ ವಿನಿಯೋಗಃ' ಎಂದು ಮಾತ್ರ ಕೊಟ್ಟಿರುತ್ತಾರೆ. ಆದರೆ ಅದು ಮುಗಿಸುವುದಕ್ಕೆ ಸರಿಹೊಂದುವುದಿಲ್ಲ. ಇದೇ ರೀತಿ ಅಂಗನ್ಯಾಸ ಮಾಡಿದ ನಂತರ 'ಇತಿ ದಿಗ್ಬಂಧಃ' ಎಂದು ತೋರಿಸುತ್ತಾರೆಯೇ ಹೊರತು ಮುಗಿಸುವಾಗ 'ಇತಿ ದಿಙ್ಮುಖಃ' ಎಂದು ಹೇಳಬೇಕೆಂದು ಯಾವ ಪುಸ್ತಕವೂ ತೋರಿಸಿರುವುದಿಲ್ಲ. ಅದನ್ನು ನನಗೆ ಮಂತ್ರೋಪದೇಶ ಮಾಡಿದ ಗುರುಗಳು ಒತ್ತಿ ಒತ್ತಿ ಹೇಳಿದ್ದರಿಂದ ನಾನೂ ಎಲ್ಲರಿಗೂ ತೋರಿಸಿಕೊಡುತ್ತಿದ್ದೇನೆ.

17. ಧ್ಯಾನಶ್ಲೋಕ: — ಹಂಸ ಮಂತ್ರಗಳನ್ನು (ತಂತ್ರಸಾರದಲ್ಲಿ ಮೂರು ಹಂಸಮಂತ್ರಗಳನ್ನು — ಷಡಕ್ಷರ, ಸಪ್ತಾಕ್ಷರ, ಅಷ್ಟಾಕ್ಷರ — ಹೇಳಿದ್ದಾರೆ) ಜಪಿಸುವಾಗ "ಧ್ಯಾಯೇದ್ ರವೀಂದು..." ಎಂಬ ಶ್ಲೋಕವನ್ನು ಹೇಳಿಕೊಂಡು ಅದರಲ್ಲಿ ಹೇಳಿದಂತೆ ಆ ಹಂಸಮೂರ್ತಿಯನ್ನು ಧ್ಯಾನಿಸುತ್ತಾ ಜಪ ಮಾಡಬೇಕು.

ಧ್ಯಾಯೇದ್ ರವೀಂದುಕರಮಿಂದು ಸಹಸ್ರಲಕ್ಷ-
ಕಾಂತಿಂ ಪ್ರಿಯಾಸಹಿತಮಾಸ್ಥಿತಮಿಂದುಬಿಂಬೇ|
ಶಂಖಾರಿ-ದೋರ್‌ದ್ವಯ ಮುದರ್ಕಮಹೇಂದುಬಿಂಬಾತ್
ಸಂಸಿಚ್ಯಮಾನಮಮೃತೇನ ರಮಾಧಿನಾಥಮ್ ||

ಕಠಿಣ ಶಬ್ದಾರ್ಥ: ರವಿ-ಸೂರ್ಯ, ಇಂದು-ಚಂದ್ರ. ಕರ-ಕೈ (ಇಲ್ಲಿ ಮೇಲಿನ ಎರಡು ಕೈಗಳೆಂದು ತಿಳಿಯಬೇಕು). ಸಹಸ್ರ-ಸಾವಿರ, ಲಕ್ಷ-ನೂರು ಸಾವಿರ (ಅಲ್ಪಾಧಿಕಾರಿಗಳು ಸಹಸ್ರ ಚಂದ್ರರಂತೆಯೂ, ಉತ್ತಮಾಧಿಕಾರಿಗಳು ಲಕ್ಷ ಚಂದ್ರರಂತೆಯೂ ಕಾಂತಿಯುಳ್ಳವನೆಂದು ಧ್ಯಾನಿಸಬೇಕು). ಆಸ್ಥಿತಂ-ಇರುವ ಅಥವಾ ಕುಳಿತಿರುವ. ನಿಂತಿದ್ದಾನೆ ಎಂದು ಭಾವಿಸಿದರೆ 'ಇರುವ' ಎಂದೂ [ಕುಳಿತಿದ್ದಾನೆ ಎಂದು ಭಾವಿಸಿದರೆ 'ಕುಳಿತಿರುವ' ಎಂದೂ] ಅರ್ಥಮಾಡಿಕೊಳ್ಳಬೇಕು. ಎರಡು ರೀತಿಯೂ ಧ್ಯಾನಮಾಡಲಿಕ್ಕೆ ಬರುತ್ತದೆ). 'ಸ್ಥಾ' ಧಾತುವಿಗೆ ನಿಲ್ಲು stand ಎಂದೂ ಇರು stay ಎಂದೂ ಎರಡೂ ಅರ್ಥವಾಗುತ್ತದೆ. ಆ + ಸ್ಥಾ ಎಂಬುದರ ಭೂತಕೃದಂತ ರೂಪವೇ ಆಸ್ಥಿತ). ಇಂದುಬಿಂಬೇ — ಚಂದ್ರಮಂಡಲದಲ್ಲಿ, ಅರಿ-ಚಕ್ರ, ದೋಃ-ತೋಳು, ಬಾಹು-ದ್ವಯಂ — ಎರಡು, ಜೊತೆ, ಜೋಡಿ. ಉದರ್ಕ — ಉದ್ರಿಕ್ತ, ಬೇರೆಯಾದ (ಭಲಾರಿ) ಉಪರ್ಯವಶಿಷ್ಟ-ಮೇಲ್ಭಾಗದಿಂದ ಬರುತ್ತಿರುವ. ಸಂಸಿಚ್ಯಮಾನಂ (-ನೆನೆಸಲ್ಪಡುತ್ತಿರುವ, ತೋಯಿಸಲ್ಪಡುತ್ತಿರುವ) (ಅರ್ಥಾತ್ ಅಭಿಷೇಕ ಮಾಡಲ್ಪಡುತ್ತಿರುವ) (ಇದು ಕರ್ಮಣಿ ವರ್ತಮಾನಕೃದಂತರೂಪ) ರಮಾಧಿನಾಥಂ-ರಮಾಪತಿಯಾದ ಹಂಸರೂಪಿ ಪರಮಾತ್ಮನನ್ನು.

(ಪದಶಃ ಅರ್ಥ) ರವೀಂದು-ಕರಂ — ಮೇಲಿನ ಎರಡು ಕೈಗಳಲ್ಲಿ ರವಿಯ (ಸೂರ್ಯ)ನ್ನು ಇಂದುವ (ಚಂದ್ರನ)ನ್ನೂ ಹಿಡಿದುಕೊಂಡಿರುವ, ಶಂಖಾರಿ-ದೋರ್ದ್ವಯಂ—ದೋಃ—ದ್ವಯಂ—ಕೆಳಗಿನ ಎರಡು ಕೈಗಳಲ್ಲಿ ಶಂಖವನ್ನೂ (ಅರಿ =) ಚಕ್ರವನ್ನೂ ಹಿಡಿದಿರುವ, ಇಂದು-ಸಹಸ್ರಲಕ್ಷ-ಕಾಂತಿಂ-(ಅಧಿಕಾರ ಭೇದದಿಂದ) ಸಾವಿರ ಚಂದ್ರರಂತೆಯೂ ಲಕ್ಷ ಚಂದ್ರರಂತೆಯೂ ಅಥವಾ ಬನ್ನಂಜೆ ಗೋವಿಂದಾಚಾರ್ಯರು ಉಪಹರಿಸಿರುವ 'ಶತಂ ದಶ ಸಹಸ್ರಂ ಚ ಸರ್ವಮಕ್ಷಯ್ಯವಾಚಕಮ್' ಎಂಬ ಮಹಾಭಾರತ ವಚನದಂತೆ ಅನಂತ ಚಂದ್ರರಂತೆ ಕಾಂತಿಯುಳ್ಳ, ಪ್ರಿಯಾಸಹಿತಂ—ತನ್ನ ಭಾರ್ಯೆಯಾದ ಲಕ್ಷ್ಮೀದೇವಿಯೊಡನೆ, ಇಂದುಬಿಂಬೇ-ಚಂದ್ರಮಂಡಲದ ಮಧ್ಯದಲ್ಲಿ, ಆಸ್ಥಿತಂ-ಕುಳಿತಿರುವಂಥಾ, ಮತ್ತು ಉದರ್ಕಮಹೇಂದು ಬಿಂಬಾತ್ — ಉದರ್ಕ (ಉದ್ರಿಕ್ತ-ಫಲಾರೀ, ಉಪರ್ಯವಶಿಷ್ಟ-ನಾರಾಯಣೀಯ-ಬನ್ನಂಜೆ ಗೋ.) ತಾನು ಕುಳಿತಿರುವ ಚಂದ್ರಮಂಡಲದ ಮೇಲ್ಭಾಗದಿಂದ ತೊಟ್ಟಿಕ್ಕುತ್ತಿರುವ, ಅಮೃತೇನ-ಅಮೃತದಿಂದ, ಸಂಸಿಚ್ಯಮಾನಂ = ಅಭಿಷಿಕ್ತನಾಗುತ್ತಿರುವ, ರಮಾಧಿನಾಥಂ—ರಮಾಪತಿಯಾದ ಹಂಸರೂಪಿ ಪರಮಾತ್ಮನನ್ನು. ಧ್ಯಾಯೇತ್-ಧ್ಯಾನ ಮಾಡಬೇಕು.

ತಾತ್ಪರ್ಯ — ಹಂಸರೂಪೀ ಪರಮಾತ್ಮನು ಚಂದ್ರಮಂಡಲದ ಮಧ್ಯದಲ್ಲಿ ಲಕ್ಷ್ಮೀಸಮೇತನಾಗಿ (ಕುಳಿತಿದ್ದಾನೆ ಅಥವಾ) ನಿಂತಿದ್ದಾನೆ. ಅವನು ಮೇಲ್ಭಾಗದ ಎರಡು ಕೈಗಳಲ್ಲಿ ಸೂರ್ಯ—ಚಂದ್ರರನ್ನೂ ಕೆಳಗಿನ ಎರಡು ಕೈಗಳಲ್ಲಿ ಶಂಖ-ಚಕ್ರಗಳನ್ನೂ ಹಿಡಿದಿದ್ದಾನೆ. ಅವನು ಸಾವಿರಾರು (ಅಥವಾ ಉತ್ತಮಾಧಿಕಾರಿಗಳಾದ-ದೇವತೆಗಳಿಗೆ ಅಥವಾ ಮಹರ್ಷಿಗಳಿಗೆ ಲಕ್ಷಗಟ್ಟಲೆ) ಚಂದ್ರರಂತೆ ಪ್ರಕಾಶಿಸುತ್ತಿದ್ದಾನೆ. ಅವನು ಸನ್ನಿಹಿತವಾಗಿರುವ ಚಂದ್ರಮಂಡಲದ ಮೇಲ್ಭಾಗದಿಂದ ಅಮೃತವು ಸುರಿಯುತ್ತಿದ್ದು ಅವನಿಗೆ ಅಭಿಷೇಕ ಮಾಡುತ್ತಿದೆ — ಎಂದು ಧ್ಯಾನಮಾಡಬೇಕು ಎಂಬುದೇ ಈ ಶ್ಲೋಕದ ಮುಖ್ಯ ತಾತ್ಪರ್ಯ.

ಆದಷ್ಟುಮಟ್ಟಿಗೆ ಈ ರೀತಿ ಮೂರ್ತಿಯನ್ನೇ ಚಿಂತನೆ ಮಾಡುತ್ತಾ ಜಪ ಮಾಡಬೇಕು. ಈ ರೂಪವು ಏಕಾಏಕಿ ಧ್ಯಾನಗೋಚರವಾಗುವುದಿಲ್ಲ. ಅರ್ಥ ತಿಳಿದುಕೊಂಡು ಈ ರೀತಿ ಯೋಚಿಸುತ್ತಾ ಇದ್ದರೆ ಎಷ್ಟೋ ವರ್ಷಗಳಾದ ಬಳಿಕ ಈ ರೂಪ ಧ್ಯಾನಗೋಚರವಾಗುತ್ತದೆ. ಈ ಜನ್ಮದಲ್ಲಿ ಆಗದಿದ್ದರೂ ಮುಂದಿನ ಜನ್ಮಾಂತರದಲ್ಲಾದರೂ ಪ್ರತ್ಯಕ್ಷವಾಗಿ ಆದೀತು. ಆದರೆ ನಿರಂತರ ಅಭ್ಯಾಸ ಮಾಡುತ್ತಿರಬೇಕು.

**18.** ಹಂಸಮಂತ್ರದಲ್ಲಿ ಎರಡು ಭಾಗಗಳಿವೆ — ನಾವು ಹಿಂದಿನ ದಿನದ ಸೂರ್ಯೋದಯದಿಂದ ಆರಂಭಿಸಿ ಆ ದಿನದ ಸೂರ್ಯೋದಯದವರೆಗೆ ಮಾಡಿದ ಶ್ವಾಸರೂಪ ಜಪವನ್ನು ಶ್ರೀಹಂಸರೂಪಿ ಪರಮಾತ್ಮನಿಗೆ ಅರ್ಪಿಸುವುದು ಒಂದು

ಭಾಗ. ಇದು ಪ್ರತಿನಿತ್ಯ ಹಂಸಮಂತ್ರ ಜಪ ಮಾಡುವವರ ವಿಚಾರವಾಯ್ತು. ಪ್ರಾರಂಭಿಸುವ ದಿನ ಜನನಾದಾರಭ್ಯ ಆ ದಿನದವರೆಗೆ ಮಾಡಿದ ಸಕಲ ಜಪವನ್ನೂ ಒಟ್ಟಿಗೆ ಸಮರ್ಪಿಸಬೇಕು—ಇದು ಮೊದಲನೆಯ ಭಾಗ. ಅಥವಾ ಮಧ್ಯೆ ಕಾರಣಾಂತರಗಳಿಂದ ಕೆಲವು ದಿನ ತಪ್ಪಿಹೋಗಿದ್ದರೆ ಹಿಂದಿನ ದಿನ ಸಮರ್ಪಣೆ ಮಾಡಿದ ದಿನದಿಂದ ಇವತ್ತಿನವರೆಗೆ ಮಾಡಿ ಸಕಲ ಜಪವನ್ನೂ ಅರ್ಪಿಸಬೇಕು. ಇದೆಲ್ಲಾ ಪೂರ್ವಭಾಗವೆನಿಸುತ್ತದೆ.

ಅನಂತರ ಇವತ್ತಿನ ಸೂರ್ಯೋದಯಾದಾರಭ್ಯ ನಾಳೆ ಸೂರ್ಯೋದಯದವರೆಗೆ ಏನು ಶ್ವಾಸರೂಪ ಜಪ ಮುಖ್ಯಪ್ರಾಣದೇವರ ಪ್ರೇರಣೆಯಿಂದ ಮಾಡುವೆನೋ ಅದೆಲ್ಲವೂ ನಿನ್ನ ಪೂಜೆಯಾಗಲಿ ಎಂದು ಹೇಳುವುದು ಎರಡನೇ ಭಾಗ.

ಇದರಲ್ಲಿ ಹಿಂದಿನದನ್ನು ಸಮರ್ಪಣೆ ಮಾಡುವ ಪೂರ್ವಭಾಗಕ್ಕೆ ಎಲ್ಲರೂ (ಗೃಹಸ್ಥರು, ಬ್ರಹ್ಮಚಾರಿಗಳು, ಯತಿಗಳು ಸರ್ವರೂ) ಯಥಾಕ್ರಮವಾಗಿ ಅಂಗನ್ಯಾಸಾದಿಗಳನ್ನೂ ವರ್ಣನ್ಯಾಸಾದಿಗಳನ್ನೂ ಮಾಡಿ ಧ್ಯಾನಶ್ಲೋಕವನ್ನೂ ಹೇಳಿಕೊಂಡು ಆಮೇಲೆ ಹಿಂದಿನ ಜಪವನ್ನು ಸಮರ್ಪಿಸಬೇಕು.

ಆದರೆ ಉತ್ತರಭಾಗ ಮಾಡುವಾಗ ಬ್ರಹ್ಮಚಾರಿಗಳು ಸೃಷ್ಟಿಕ್ರಮ ಮಾಡಬೇಕಾದ್ದರಿಂದ ಮೊದಲೇ 'ಇವತ್ತಿನಿಂದ ನಾಳೆವರೆಗೆ ಮಾಡುತ್ತೇನೆ' ಎಂದು ಸಂಕಲ್ಪ ಮಾಡಿ ಹಂಸಮಂತ್ರ ಜಪಿಸಿ ಅನಂತರ ಪ್ರಾಣಾಯಾಮ ಅಂಗನ್ಯಾಸಗಳನ್ನು ಮಾಡಿ ಧ್ಯಾನಶ್ಲೋಕ ಹೇಳಿ ಮುಗಿಸಬೇಕು.

ಆದರೆ ಗೃಹಸ್ಥರಿಗೆ ಸ್ಥಿತಿಕ್ರಮವೇ ಪ್ರಶಸ್ತವಾದ್ದರಿಂದ ಅವರು ಪೂರ್ವಭಾಗ ಆದ ಕೂಡಲೇ ಪುನಃ ಪ್ರಾಣಾಯಾಮ. ಅಂಗನ್ಯಾಸಾದಿಗಳನ್ನು ಮಾಡಿ ಧ್ಯಾನ ಶ್ಲೋಕವನ್ನೂ ಹೇಳಿ ಆಮೇಲೆ ಸಂಕಲ್ಪ ಮಾಡಿ ಜಪ ಮಾಡಿ ಮುಗಿಸಿಬಿಡಬೇಕು. ಅನೇಕ ಪುಸ್ತಕಗಳಲ್ಲಿ ಈ ಸ್ಥಿತಿಕ್ರಮವನ್ನು ಮಾತ್ರ ತೋರಿಸಿರುತ್ತಾರೆ. ಬ್ರಹ್ಮಚಾರಿಗಳಿಗೆ ಅನುಕೂಲವಾದ ಸೃಷ್ಟಿಕ್ರಮವನ್ನು ತೋರಿಸಿಯೂ ಇರುವುದಿಲ್ಲ ಹೋಗಲಿ, ಸೂಚನೆಯನ್ನೂ ಕೊಡುವುದಿಲ್ಲ. ನನಗೆ ಉಪದೇಶ ಕೊಡುವಾಗ ನನಗೆ ಈ ಮಂತ್ರ ಉಪದೇಶ ಮಾಡಿದ ಗುರುಗಳು 'ನೀನು ಬ್ರಹ್ಮಚಾರಿಯಾದ್ದರಿಂದ ನೀನು ಈ ಸೃಷ್ಟಿಕ್ರಮದಲ್ಲೇ ಮಾಡು, ಪುಸ್ತಕದಲ್ಲಿರುವ ಕ್ರಮ ಗೃಹಸ್ಥರಿಗೆ ಸೇರಿದ್ದು' ಎಂದು ಎಚ್ಚರಿಕೆ ಕೊಟ್ಟಿದ್ದರು. ಆದ್ದರಿಂದ ಈ ವಿಷಯವನ್ನು ಇಲ್ಲಿ ಸ್ಪಷ್ಟಪಡಿಸಿದ್ದೇನೆ. ಇದೆಲ್ಲವೂ ಜಪವಿಧಿಯಲ್ಲಿ ನೋಡಿದಾಗ ಚೆನ್ನಾಗಿ ಅರ್ಥವಾಗುವುದು.

**19.** ಅರ್ಘ್ಯ ಪ್ರದಾನ — ಯಾವ ಮಂತ್ರವೇ ಮಾಡಲಿ, ಜಪ ಮುಗಿದ ಮೇಲೆ ಆ ಮಂತ್ರದಿಂದಲೇ ಅರ್ಘ್ಯ ಕೊಡುವುದೂ ಜಪದ ಒಂದು ಅಂಗವಾಗಿದೆ. ಆದ್ದರಿಂದ ಹಂಸಮಂತ್ರ ಜಪ ಮುಗಿದ ಮೇಲೂ ಅರ್ಘ್ಯ ಕೊಡಬೇಕು. ಹತ್ತು

ಜಪಕ್ಕೆ ಒಂದು ಅರ್ಘ್ಯ ಕೊಡಬೇಕು ಎಂಬುದು ಸಾಧಾರಣ ನಿಯಮ. ನೂರೆಂಟು ಜಪ ಮಾಡಿದರೆ ಮೂರು ಅರ್ಘ್ಯ ಕೊಟ್ಟರೇ ಸಾಕು. ಆ ಕ್ರಮ ಹೇಗೆಂದರೆ — ಪಂಚಪಾತ್ರೆಯಲ್ಲಿಟ್ಟುಕೊಂಡಿರುವ ನೀರನ್ನು (ಸ್ವಲ್ಪ ಜಪಕ್ಕಾದರೆ) ಉದ್ಧರಣೆಯಲ್ಲಿ ತೆಗೆದುಕೊಂಡು ಅದನ್ನು (ನೀರನ್ನು) ಆ ಮಂತ್ರದಿಂದಲೇ ಮೂರಾವರ್ತಿ ಅಭಿಮಂತ್ರಿಸಿ, ಆ ಮಂತ್ರ ಹೇಳಿ (ಉಚ್ಚರಿಸಿ) ನೀರು ಕೈಗೆ ಹಾಕಿಕೊಂಡು 'ಮಧ್ವಾಂತರ್ಗತ' ಅಥವಾ 'ಭಾರತೀರಮಣ ಮುಖ್ಯ ಪ್ರಾಣಾಂತರ್ಗತ' ಹಂಸರೂಪಿ-ಪರಮಾತ್ಮಾನಂ ತರ್ಪಯಾಮಿ' ಎಂದು ಹೇಳಿ ಅರ್ಘ್ಯ ಕೊಡಬೇಕು. ಹೀಗೆಯೇ ಪ್ರತಿಯೊಂದು ಮಂತ್ರಕ್ಕೂ ಬೇರೆ ಬೇರೆ ಅರ್ಘ್ಯ ಕೊಡಬೇಕು. ಸಾವಿರಗಟ್ಲೆ ಜಪಮಾಡಿದ್ದರೆ ಪಾತ್ರೆಯಲ್ಲಿರುವ ನೀರನ್ನೇ ಅಭಿಮಂತ್ರಿಸಿ ಆ ನೀರನ್ನು ಉದ್ಧರಣೆಯಿಂದ ತೆಗೆದು-ತೆಗೆದು ಅರ್ಘ್ಯಕೊಡಬೇಕು.

**20.** ಹಂಸಮಂತ್ರದ ಮಹಿಮೆ — ಹಿಂದೆ ಈ ಮಂತ್ರೋದ್ಧಾರ ಮಾಡುವಾಗಲೇ 8ನೇ ಖಂಡದಲ್ಲಿ (ಪುಟ ೫ರಲ್ಲಿ) ಈ ಹಂಸ ಮಂತ್ರದ ಮಹಿಮೆಯನ್ನು ಸ್ವಲ್ಪ ಹೇಳಲಾಗಿತ್ತು. ಈ ಮೂರು ಮಂತ್ರಗಳೂ ಧರ್ಮಾದಿ ಪುರುಷಾರ್ಥ ಚತುಷ್ಟಯಕ್ಕೆ ಕಲ್ಪವೃಕ್ಷದಂತೆ ಇವೆಯೆಂದೂ, ಇವು ವಿಷ್ಣುವಿಗೆ ಅತ್ಯಂತ ಪ್ರಿಯವಾದುವೆಂದೂ 'ವಿಶೇಷ ಜ್ಞಾನ'ವನ್ನು ಕೊಡತಕ್ಕವು ಎಂದೂ ಇದು ದೊಡ್ಡ 'ಪ್ರಾತರ್ಯೋಗ'ವೆಂದೂ ಹೇಳಲಾಗಿತ್ತು. ಅದಕ್ಕೂ ಮುಂದೆ (ಶ್ಲೋ. ೨೬-೨೭) ತಂತ್ರಸಾರದಲ್ಲಿ ಹೀಗೆ ಹೇಳಿದೆ —

> **ಅಶೇಷದೋಷದಹನಸ್ ತತ್ತ್ವಜ್ಞಾನಪ್ರದಾಯಕಃ** ೨೬
> **ಅಷ್ಟೈಶ್ವರ್ಯಪ್ರದಶ್ಚೈವ ಕೃತಾದೌ ಸಮುಪಾಸತಾಮ್।**

(ಅರ್ಥ) ಹಿಂದೆ 'ಪ್ರಾತರ್ಯೋಗೋ ಮಹಾನಯಮ್'- ಇದು ದೊಡ್ಡ ಪ್ರಾತರ್ಯೋಗದಂತಿದೆ ಎಂದು ಏಕವಚನ ಬಂದದ್ದರಿಂದ ಏಕವಚನದಲ್ಲೇ ಹೇಳುತ್ತಾರೆ — ಇದು ಸಮಸ್ತ ವಿಧವಾದ ದೋಷಗಳನ್ನೂ (ಪಾಪಗಳನ್ನೂ, ಅಜ್ಞಾನವನ್ನೂ, ರೋಗ-ರುಜಿನಾದಿ ದೋಷಗಳನ್ನೂ) ನಿಶ್ಶೇಷವಾಗಿ ಕಳೆಯತಕ್ಕಂಥಾದ್ದಾಗಿದೆ — ಕಳೆಯುವುದಲ್ಲದೆ — ಸುಟ್ಟುಹಾಕಿಬಿಡುತ್ತದೆ (ದಹನಃ). ತತ್ತ್ವಜ್ಞಾನವನ್ನು ಅಧಿಕವಾಗಿ (ಅವರವರ ಯೋಗ್ಯತೆಗೆ ತಕ್ಕಂತೆ ಹೆಚ್ಚು ಹೆಚ್ಚಾಗಿ — ಪ್ರ = ಪ್ರಕರ್ಷೇಣ) ಕೊಡತಕ್ಕದ್ದೂ ಆಗಿದೆ. ಅದಕ್ಕೂ ಹೆಚ್ಚಾಗಿ ಈ ಮಂತ್ರ ಜಪದಿಂದಲೇ ಕೃತಯುಗ-ತ್ರೇತಾದಿ ಯುಗಗಳಲ್ಲಿ ಅಣಿಮಾ-ಮಹಿಮಾದ್ಯಷ್ಟ ಸಿದ್ಧಿಗಳೂ ಲಭಿಸುತ್ತದೆ. ಹೀಗೆ ಈ ಹಂಸಮಂತ್ರವು ಸಕಲಾಭೀಷ್ಟಪ್ರದವೆಂದು ಹೇಳಿದಂತಾಯಿತು.

**21.** ಹಂಸಾದಿ ಮೂರು ಪದಗಳ ಅರ್ಥ — ಹಂಸ ಮತ್ತು ಸೋಹಂ ಎಂಬ ಎರಡು ಪದಗಳ ಅರ್ಥವನ್ನು ಬೃಹದ್ಭಾಷ್ಯದಲ್ಲಿ (೩ ಅಧ್ಯಾಯ, ೫ನೇ ಅವ್ಯಾಕೃತ ಬ್ರಾಹ್ಮಣ, ೪ನೇ ಖಂಡ) ಉದಹರಿಸಿರುವ ಹರಿವಂಶವಾಕ್ಯವು ಹೀಗೆ ಹೇಳುತ್ತದೆ —

'ಹಂತೃತ್ವಾದ್ಧಂಸನಾಮ್ಯಾಸೌ ಸೋऽಹಂ ಚಾಸಾವ ಹೇಯತಃ |'

(ಅರ್ಥ) ಹನ್ ಎಂದರೆ ಕೊಲ್ಲು, ಸಂಹಾರ ಮಾಡು ಎಂದರ್ಥ. ಆದರಿಂದ ಸಕಲ ಪಾಪಗಳನ್ನು ಅಥವಾ ಸಕಲ ದೋಷಗಳನ್ನು ನಾಶ ಮಾಡುವುದರಿಂದ ಅಥವಾ ಪ್ರಳಯಕಾಲದಲ್ಲಿ ಸರ್ವವನ್ನು ನಾಶ ಮಾಡುವುದರಿಂದ ಆವನಿಗೆ ಹಂಸ ಎಂದು ಹೆಸರು. ಹಾ ಎಂಬ ಧಾತುವಿಗೆ ಬಿಡು, ತ್ಯಜಿಸು ಎಂದು ಅರ್ಥವಿದೆ. ಬಿಡುವುದಕ್ಕೆ ಆಗುವಂಥಾ ಅಥವಾ ಬಿಡಬಹುದಾದಂಥಾ, ಬಿಡಲು ಯೋಗ್ಯವಾದಂಥಾದ್ದನ್ನು ಹೇಯ ಎನ್ನುತ್ತಾರೆ. ತದ್ವಿರುದ್ಧವಾದುದು 'ಅಹೇಯ'-ಬಿಡಲು ಸಾಧ್ಯವಿಲ್ಲದ್ದು ಎಂದರ್ಥ. ಭಗವಂತ ಎಲ್ಲಾ ಕಡೆ ವ್ಯಾಪಿಸಿಕೊಂಡಿರುವುದರಿಂದ ಅವನನ್ನು ಬಿಡಲು ಸಾಧ್ಯವೇ ಇಲ್ಲ—ಅವನು 'ಅಹೇಯ'ನಾದ್ದರಿಂದಲೇ 'ಸೋऽಹಂ' ಎಂದು ಕರೆಯಲ್ಪಡುತ್ತಾನೆ ಎಂದು ಹರಿವಂಶ ಹೇಳುತ್ತದೆ. ಕಠೋಪನಿಷದ್ಭಾಷ್ಯದಲ್ಲಿ (೨ ಅಧ್ಯಾಯ ೨ನೇ ವಲ್ಲಿ ೨ನೇ ಮಂತ್ರ) ಉದಹರಿಸಿರುವ ಕೂರ್ಮಪುರಾಣ ವಾಕ್ಯವು ಹಂಸ ಶಬ್ದಾರ್ಥವನ್ನು ಹೀಗೆ ಹೇಳುತ್ತದೆ —

'ನಿತ್ಯಹೀನೋऽಖಿಲೈರ್ ದೋಷೈಃ ಸಾರರೂಪೋ ಯತೋ ಹರಿಃ
ಹಂಸ ಇತ್ಯುಚ್ಯತೇ ತಸ್ಮಾತ್...............'

ಹೀನ ಎಂಬುದೂ ಹಾ (ಬಿಡು) ಧಾತುವಿನ ರೂಪವೇ, ರಹಿತ, ಇಲ್ಲದವನು ಎಂದರ್ಥ. ಸಕಲ ದೋಷಗಳಿಂದಲೂ ರಹಿತನಾದ್ದರಿಂದ ಆ ಭಗವಂತ ಹಂ ಎನ್ನಿಸುತ್ತಾನೆ. ಸಾರರೂಪನಾದ್ದರಿಂದ ಸ ಎನ್ನಿಸುತ್ತಾನೆ. ಹೀಗೆ ಸಕಲ ದೋಷ ದೂರನಾದ್ದರಿಂದಲೂ ಸಾರರೂಪನಾದ್ದರಿಂದಲೂ ಅವನು ಹಂಸಃ ಎಂದು ಕರೆಯಲ್ಪಡುತ್ತಾನೆ ಎಂಬುದು ಎರಡನೇ ಅರ್ಥ.

ಅನುವ್ಯಾಖ್ಯಾನದಲ್ಲಿ (ಪ್ರಥಮಾಧ್ಯಾಯ ೪ನೇ ಪಾದ ೨ನೇ ಅಧಿಕರಣದಲ್ಲಿ) 'ಸ್ವಾಹಾ' ಶಬ್ದಾರ್ಥವನ್ನು ಹೀಗೆ ಹೇಳಿದ್ದಾರೆ —

ಸ್ವೀಯಂ ಸ್ವೀಕುರುತೇ ಯಸ್ಮಾತ್ ಸ್ವಾಹೇತ್ಯುಕ್ತೋ ಜನಾರ್ದನ|

ಸ್ವಾಹಾ ಎಂಬಲ್ಲಿ ಸ್ವ + ಆ + ಹ ಎಂದು ಮೂರು ಅಂಶಶಗಳಿವೆ. ಸ್ವ-ಎಂದರೆ ಸ್ವಕೀಯವಾದುದನ್ನು, ಆ-ಹ್ಯ— ಸ್ವೀಕರಿಸುವುದರಿಂದ ಆ ಭಗವಂತ ಸ್ವಾಹಾ ಎಂದು ಕರೆಯಲ್ಪಡುತ್ತಾನೆ. ಸ್ವಾಹಾ ಶಬ್ದಕ್ಕೆ ಇನ್ನೊಂದು ಅರ್ಥವನ್ನು ತೈತ್ತಿರೀಯೋಪನಿಷತ್ ಖಂಡಾರ್ಥದಲ್ಲಿ ರಾಘವೇಂದ್ರತೀರ್ಥರು ಹೀಗೆ ತೋರಿಸಿದ್ದಾರೆ—ಸು—ಸುಷ್ಠು ಆಹೂಯತೇ ವೇದೈಃ ಪ್ರತಿಪಾದ್ಯತ ಇತಿ ಸ್ವಾಹಾ| (ವಿವರಣೆ) ಸ್ವಾಹಾ ಎಂಬಲ್ಲಿ ಸು + ಆ + ಹಾ ಎಂದು ಮೂರು ಭಾಗ. ಸು-ಸುಷ್ಠು = ಚೆನ್ನಾಗಿ (ಆದಿಯಲ್ಲಿ ಮಧ್ಯದಲ್ಲಿ ಅಂತ್ಯದಲ್ಲಿ ಎಲ್ಲ ಕಡೆಯೂ) ವೇದಗಳಲ್ಲಿ ಆ-ಹಾ—ಆ ಹೂಯತೇ = ಪ್ರತಿಪಾದಿಸಲ್ಪಡುವವನಾದ್ದರಿಂದಲೂ ಸ್ವಾಹಾ ಎಂದು ಹೆಸರು.

22. ಮೂರು ಮಂತ್ರಗಳು — ಮೂರು ಮಂತ್ರಗಳಲ್ಲಿ ಸುಜೀವಿಗಳಲ್ಲಿ–ದೇವತಾದಿಗಳಲ್ಲಿ ಹಂಸಃ ಎಂದೂ, ದೈತ್ಯರಲ್ಲಿ ಸೋsಹಂ (ಅವನೇ ನಾನು) ಎಂದೂ, ನಿತ್ಯ ಸಂಸಾರಿಗಳಲ್ಲಿ ಸ್ವಾಹಾ ಎಂದೂ ಪ್ರಾಣದೇವರು ತ್ರಿವಿಧ ಜೀವದಲ್ಲಿ ಹೀಗೆ ತ್ರಿವಿಧವಾಗಿ ಜಪಿಸುತ್ತಾರೆಂದು ಕೆಲವರ ಹೇಳಿಕೆ.

23. ಜಪಾರಂಭಕ್ಕೆ ಮುಂಚೆ — ಆದರೆ ಈ ಮಂತ್ರವನ್ನು ಆರಂಭಿಸುವುದಕ್ಕೆ ಮೊದಲೇ ಕೆಲವು ಸಿದ್ಧತೆ ಮಾಡಿಕೊಳ್ಳಬೇಕು. ಅದನ್ನು ತಂತ್ರಸಾರದಲ್ಲಿ ಹೀಗೆ ಹೇಳಿದ್ದಾರೆ —

ಆದಾವೇವ ಜಪೇ ಕುರ್ಯಾ — ಚ್ಛೋಷಣಂ ದಹನಂ ಪ್ಲುತಿಮ್ |
ವಾಯ್ವಗ್ನಿ ವಾರುಣೈರ್ ಬೀಜೈರ್ ಧ್ಯಾತ್ವಾ ತನ್ಮಂಡಲೇ ಹರಿಮ್ ||
( ೨ ಅ. ೬ ಶ್ಲೋ.)

(ಅರ್ಥ) ಜಪಕ್ಕೆ ಪ್ರಾರಂಭದಲ್ಲೇ ವಾಯುಬೀಜ ಮಂತ್ರದಿಂದ ಪಾಪ ಪುರುಷನನ್ನು ಶೋಷಣೆ ಮಾಡಬೇಕು. ಆಮೇಲೆ ಅವನನ್ನು ಅಗ್ನಿಬೀಜದಿಂದ ದಹನ ಮಾಡಬೇಕು. ಕೊನೆಗೆ ನಮ್ಮ ದೇಹವನ್ನು ಅಮೃತವೃಷ್ಟಿಯಿಂದ ವರುಣ ಬೀಜಮಂತ್ರದಿಂದ ನೆನೆಸಬೇಕು (ಅಭಿಷೇಕ ಮಾಡಿಕೊಳ್ಳಬೇಕು). ಆಚಾರ್ಯರ ಮಾತು 'ಒಗಟು' ಇದ್ದ ಹಾಗೆ — ಅದನ್ನು ತಿಳಿದುಕೊಳ್ಳುವುದು ಕಷ್ಟವೆಂದು ಭಾವಿಸಿ ಟೀಕಾರಾಯರು 'ಪದ್ಯಮಾಲಾ' ಎಂಬ ಚಿಕ್ಕ ಗ್ರಂಥದಲ್ಲಿ (ಹೆಸರೇ ಹೇಳುವಂತೆ ಅದು ಕೇವಲ ಪದ್ಯರೂಪವೇ ಆಗಿದ್ದು ೧೨೬ ಶ್ಲೋಕಗಳುಳ್ಳದ್ದಾಗಿದೆ). ಈ ವಿಧಾನವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ಈ ವಿಧಾನವನ್ನೇ ಸಾಮಾನ್ಯವಾಗಿ ''ಗುರುಮಂತ್ರ'' ಎಂದು ಹೇಳುವರು. ಸಂಧ್ಯಾವಂದನೆ ಮಾಡಿದ ಬಳಿಕ ಗುರುಮಂತ್ರ ಮಾಡಿಕೊಳ್ಳಬೇಕು ಎಂದು ಹೇಳಿದಂತಾಯಿತು.

24. ತತ್ತ್ವನ್ಯಾಸ-ಮಾತೃಕಾನ್ಯಾಸಗಳು — ಇದೇ ರೀತಿ ತಂತ್ರಸಾರದಲ್ಲೇ ಯಾವ ಮಂತ್ರಕ್ಕೇ ಆಗಲಿ, 'ವೀರ್ಯ'ಎಂದರೆ ಫಲಕೊಡುವ ಶಕ್ತಿ ಬರಬೇಕಾದರೆ ಐವತ್ತೊಂದು ವರ್ಣಗಳಿಂದ ನ್ಯಾಸ ಮಾಡಿಕೊಳ್ಳಲೇಬೇಕೆಂದು ಹೇಳಿದೆ —

ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ |
ವೀರ್ಯದಃ (ತಂ. ಸಾ. ೨/೧)

(ಅರ್ಥ) ಅಕಾರದಿಂದ ಳಕಾರದವರೆಗಿರುವ ಐವತ್ತು ಅಕ್ಷರಗಳಿಗೆ 'ಮಾತೃಕಾ'ಗಳೆಂದು ಹೆಸರು. ಅದರ ಜೊತೆಗೆ ಕ್ಷ-ಕಾರವೂ ಸೇರಿದರೆ ಐವತ್ತೊಂದು ಮಾತೃಕಾಗಳಾಗುತ್ತವೆ. ಈ ಐವತ್ತೊಂದು ವರ್ಣಗಳಿಂದ ನ್ಯಾಸ ಮಾಡಿಕೊಂಡರೆ ಮಾತ್ರವೇ ಯಾವ ಮಂತ್ರಕ್ಕಾದರೂ ವೀರ್ಯ ಬರುತ್ತದೆ — ಎಂಬುದು ಆ ವಾಕ್ಯದ ಅರ್ಥ. ಇದನ್ನೇ 'ಮಾತೃಕಾನ್ಯಾಸ' ಎನ್ನುತ್ತಾರೆ. ಅದರಂತೆಯೇ ನಮ್ಮ ಕೈಕಾಲು

ಮೊದಲಾದ ಸಕಲ ಅವಯವಗಳಿಗೂ ಅಭಿಮಾನಿಗಳಾದ 'ತತ್ತ್ವಾಭಿಮಾನಿ' ದೇವತೆಗಳನ್ನು ನೆನಸಿ ನ್ಯಾಸ ಮಾಡಿಕೊಳ್ಳುವುದೇ ತತ್ತ್ವನ್ಯಾಸ. ಪ್ರತಿಯೊಂದು ಮಂತ್ರಕ್ಕೂ ತತ್ತ್ವನ್ಯಾಸ—ಮಾತೃಕಾನ್ಯಾಸ ಮಾಡಿಕೊಂಡರೆ ಮಾತ್ರವೇ ಆ ಮಂತ್ರ ಸಿದ್ಧಿಸುತ್ತದೆ ಎಂದು ಹೇಳಿದಂತಾಯಿತು.

**25.** 'ಗುರುಮಂತ್ರ, ತತ್ತ್ವನ್ಯಾಸ ಮಾತೃಕಾನ್ಯಾಸದ ವಿವರಣೆ—'ಎಂಬ ಪುಸ್ತಕವು ಆನಂದ್ ಪ್ರಿಂಟರ್ಸ್, 25, ಗಾಂಧಿಬಜಾರ್, ಬಸವನಗುಡಿ, ಬೆಂಗಳೂರು- 560 004—ಇವರಲ್ಲಿ ಬಿಡಿ ಪುಸ್ತಕ ರೂಪವಾಗಿ ಸಿಗುತ್ತದೆ. ಆದ್ದರಿಂದ ಇಲ್ಲಿ ಹೆಚ್ಚು ವಿವರಣೆ ಕೊಟ್ಟಿಲ್ಲ. ಅನುಷ್ಠಾನ ಕ್ರಮ ಮಾತ್ರ ಮುಂದೆ ತೋರಿಸಲಾಗಿದೆ.

ಗುರುಮಂತ್ರ ತತ್ತ್ವನ್ಯಾಸ-ಮಾತೃಕಾನ್ಯಾಸ ಮಾಡಿಕೊಂಡು ಆಮೇಲೆ ಹಂಸಮಂತ್ರ ಮಾಡಿ ಪ್ರಣವಮಂತ್ರ ಮಾಡಬೇಕು. ಆದ್ದರಿಂದ ಈಗ ಪ್ರಣವ ಮಂತ್ರದ ಅನುಷ್ಠಾನ ಕ್ರಮಕ್ಕೆ ಹೋಗೋಣ.

## 1. ಪ್ರಣವ ಮಂತ್ರ

**26.** ಪ್ರಣವ ಮಂತ್ರೋದ್ಧಾರ—ಪ್ರಣವ, ತಾರ, ಓಂಕಾರ ಈ ಮೂರೂ ಪರ್ಯಾಯ ಪದಗಳು. ಪ್ರಣವ ಮಂತ್ರೋದ್ಧಾರವನ್ನು ತಂತ್ರಸಾರದ ಪ್ರಾರಂಭದಲ್ಲೇ ಕೊಟ್ಟಿದ್ದಾರೆ—

**ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ (೧ ಅ. ೩ಶ್ಲೋ.)**

(ಅರ್ಥ) ಇದು ಸಾಕ್ಷಾನ್ನಾರಾಯಣನ ಮಾತು—ಬ್ರಹ್ಮದೇವರಿಗೆ ಹೇಳಿದ ಮಾತು. 'ನಾನೊಬ್ಬನು ಮಾತ್ರವೇ ಸಮಸ್ತಗುಣಪರಿಪೂರ್ಣನಾಗಿದ್ದೇನೆ. ನನಗೆ ಪ್ರಣವವು (ಓಂಕಾರವು) ವಾಚಕವಾಗಿದೆ.' 'ಅಖಿಲಗುಣಃ' ಎಂಬುದು ಪ್ರಣವದ (ಓಂಕಾರದ) ಅರ್ಥವೂ ಆಗಿದೆ. 'ಏಕಃ' ಎಂದು ಹೇಳಿದ್ದರಿಂದ ಓಂಕಾರ ಪ್ರತಿಪಾದ್ಯನು ಶ್ರೀವಿಷ್ಣುವೊಬ್ಬನೇ ಹೊರತು ಬೇರೆ ಯಾರನ್ನೂ ಓಂಕಾರ ಹೇಳುವುದಿಲ್ಲ ಎಂದು ಸೂಚಿಸಿದಂತಾಯಿತು. ಓಂಕಾರಾರ್ಥವನ್ನು ಋಗ್ಭಾಷ್ಯದಲ್ಲೂ ಅನುವ್ಯಾಖ್ಯಾನದಲ್ಲೂ ಛಾಂದೋಗ್ಯ ಭಾಷ್ಯದಲ್ಲೂ ಹೇಳಿದ್ದಾರೆ. ಆದ್ದರಿಂದ ಕಿಂಚಿತ್ ಅದರ ಅರ್ಥವನ್ನು ತಿಳಿದುಕೊಳ್ಳೋಣ. (ಓಂಕಾರದ ಅರ್ಥದ ವಿವರಣೆಯು 'ನಖಸುತ್ತಿ'ಯ ವಿವರಣೆಯಲ್ಲಿ ವಿಸ್ತಾರವಾಗಿ ಮಾಡಲಾಗಿದೆ. ಇಲ್ಲಿ ಮುಖ್ಯಾಂಶಗಳನ್ನು ಮಾತ್ರ ಹೇಳಲಾಗಿದೆ.)

**27.** ಓಂಕಾರಾರ್ಥ—ಋಗ್ಭಾಷ್ಯದಲ್ಲಿ (ಪ್ರಾರಂಭದಲ್ಲೇ ಬಂದಿದೆ) ಹೀಗೆ ಹೇಳಲಾಗಿದೆ—

**ಓಮಶೇಷಗುಣಾಧಾರ ಇತಿ ನಾರಾಯಣೋಽಪ್ಯಸೌ॥**

(ಅರ್ಥ) ಅಸೌ—ಈ ಪರಮೇಶ್ವರನು (ಭಗವಂತನು), ಅಶೇಷಗುಣಾಧಾರಃ—ಸಕಲಗುಣಗಳಿಗೂ ಆಶ್ರಯನಾಗಿರುವ ಕಾರಣದಿಂದಲೇ, ಓಂ—ಓಂಕಾರ ವಾಚ್ಯನಾಗಿದ್ದಾನೆ. ಅಲ್ಲದೆ 'ಅಶೇಷಗುಣಾಧಾರ'ನಾದ್ದರಿಂದಲೇ, ನಾರಾಯಣಃ ಅಪಿ—ನಾರಾಯಣ ಶಬ್ದ ವಾಚ್ಯನೂ ಆಗಿದ್ದಾನೆ. ಅರ ಎಂದರೆ ದೋಷ, ತದ್ವಿರುದ್ಧವಾದುದು ನಾರ ಆದ್ದರಿಂದ ನಾರ, ಎಂದರೆ ಗುಣ ಎಂದಾಯಿತು. ನಾರ—ಗುಣಗಳಿಗೆ, ಅಯನ—ಆಶ್ರಯವಾದವನು ನಾರಾಯಣ ಎಂದು ನಾರಾಯಣ ಶಬ್ದವೂ ಗುಣಪೂರ್ಣತ್ವವನ್ನೇ ಹೇಳುವುದರಿಂದ ಪ್ರಣವ ವಾಚ್ಯನಾದ ಭಗವಂತನೇ ನಾರಾಯಣ ಶಬ್ದವಾಚ್ಯನೂ ಆಗಿದ್ದಾನೆ ಎಂಬುದು ಋಗ್ಭಾಷ್ಯದ ಈ ವಾಕ್ಯದ ಅರ್ಥ. ಇನ್ನು ಅನುವ್ಯಾಖ್ಯಾನದ ಜಿಜ್ಞಾಸಾಧಿಕರಣದಲ್ಲಿ ಮೊದಲನೇ ಸೂತ್ರದ ವಿವರಣೆಯಲ್ಲೇ ಓಂಕಾರಾರ್ಥವನ್ನು ಹೀಗೆ ಹೇಳಿದ್ದಾರೆ —

ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಮ್

(ಸಾಧಾರಣಾರ್ಥ) ಓಂಕಾರವು ಓತತ್ವವನ್ನು—ಹೆಣೆದುಕೊಂಡಿರುವುದನ್ನು (ಬಟ್ಟೆಯಲ್ಲಿ ನೂಲು ಹೆಣೆದುಕೊಂಡಿರುವಂತೆ ಓತ—ಪ್ರೋತವಾಗಿರುವಿಕೆಯನ್ನು) ಹೇಳುತ್ತದೆ. ಇದು ಆ ನಾರಾಯಣನಲ್ಲಿ ಸಕಲಗುಣಗಳೂ ಹಾಸು—ಹೊಕ್ಕಾಗಿ ಹೆಣೆದುಕೊಂಡಿವೆ ಎಂಬುದನ್ನು ಹೇಳುತ್ತದೆ.

**28. <u>ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಅರ್ಥಗಳು</u>**—ಛಾಂದೋಗ್ಯೋಪನಿಷತ್ತು 'ಓಮಿತ್ಯೇತಕ್ಷರಮುದ್ಗೀಥಮುಪಾಸೀತ' ಎಂದು ಆರಂಭವಾಗುತ್ತದೆ. ಅಲ್ಲದೆ ಉಪನಿಷತ್ತು ಆ ಶ್ರೀಹರಿಯನ್ನು ಅರ್ಥಾನುಸಂಧಾನಪೂರ್ವಕವಾಗಿ ಓಂಕಾರ—ವಾಚ್ಯನಾಗಿದ್ದಾನೆಂದೇ ಉಪಾಸನೆ ಮಾಡಬೇಕೆಂದು ಹೇಳುತ್ತದೆ. ಆದ್ದರಿಂದ ಭಾಷ್ಯದಲ್ಲಿ ಓಂಕಾರದ ನಾನಾರ್ಥಗಳನ್ನು ಪ್ರಮಾಣೋದಾಹರಣಪೂರ್ವಕವಾಗಿ ವಿವರಿಸುತ್ತಾರೆ —

'ಓಂ ನಾಮಾನಮುಪಾಸೀತ ತದರ್ಥಗುಣಪೂರ್ವಕಮ್।
ಓತತ್ವಾ—ದವನಾನ್—ಮಾನಾ—ದಧಿಕೋಚ್ಚತ್ವಕಾರಣಾತ್॥
ಆನಂದಾ—ದೋಜಸಶ್ಚೈವ ಭರಣಾದೋಮುದಾಹೃತ'ಇತಿ ಸಮನ್ವಯೇ।

(ಇದರ ಅರ್ಥ—ವೇದೇಶೀಯ ಟೀಕಾ ಮತ್ತು ರಾಯರ ಖಂಡಾರ್ಥಗಳನ್ನು ಅನುಸರಿಸಿ) ಆ ಭಗವಂತ ಶ್ರೀವಿಷ್ಣುವನ್ನು ಅರ್ಥಾನುಸಂಧಾನಪೂರ್ವಕವಾಗಿ ಓಂಕಾರಪ್ರತಿಪಾದ್ಯನೆಂದು ಉಪಾಸನೆ ಮಾಡಬೇಕು. ಓಂಕಾರದ ಅರ್ಥಗಳೇನೆಂದರೆ — ೧. **ಓತತ್ವಾತ್—ಗತತ್ವಾತ್ ಪ್ರವಿಷ್ಟತ್ವಾದ್ವಾ**—ಸಕಲ ಗುಣಗಳೂ ಅವನಲ್ಲಿ ಇರುವುದರಿಂದಲೂ ಅಥವಾ ಸಕಲಗುಣಗಳೂ ಅವನಲ್ಲಿ ಪ್ರವೇಶ ಮಾಡಿ ತುಂಬಿಕೊಂಡಿರುವುದರಿಂದಲೂ ಎಂಬುದು ವೇದೇಶೀಯ ರೀತ್ಯಾ ಅರ್ಥ. ರಾಯರ ಖಂಡಾರ್ಥದಂತೆ ಓತತ್ವಾತ್ ಎಂದರೆ ಓತಮಸ್ಮಿನ್ ಜಗದಿತಿ,

ಸಕಲ ಜಗತ್ತು ಆವನಲ್ಲಿ ತುಂಬಿಕೊಂಡಿರುವುದರಿಂದ ಓಂ, ಸರ್ವರಿಗೂ ಉಪಜೀವನವಾಗಿರುವುದರಿಂದ ಓಂ ಅಥವಾ ಓತಂ–ನಿಯಾಮಕತಯಾ ಜಗತಿ ಪ್ರವಿಷ್ಟಮಿತಿ ವಾ, ಜಗತ್ತಿನಲ್ಲಿ ನಿಯಾಮಕನಾಗಿ ಒಳಗೆ–ಹೊರಗೆಲ್ಲಾ ಪ್ರವೇಶ ಮಾಡಿರುವುದರಿಂದಲೂ ಓಂ. ೨. ಅವನಾತ್–ಸಕಲ ಜಗತ್ತನ್ನೂ ಸಕಲರನ್ನೂ (ಅವ–ರಕ್ಷಿಸು) ರಕ್ಷಿಸುವುದರಿಂದಲೂ ಅವತೀತಿ ಓಂ, ೩. ಮಾನಾತ್–ಮಾತಿ ಜಾನಾತೀತಿ ವ್ಯುತ್ಪತ್ತ್ಯಾ ಸರ್ವಜ್ಞಮಿತಿ ವಾ(ಖಂಡಾರ್ಥ) 'ಮಾ'ಧಾತುವಿಗೆ ತಿಳಿ, ಅರಿತುಕೋ ಎಂದರ್ಥವಿರುವುದರಿಂದ ಮಾತಿ–ಸಮಸ್ತವನ್ನೂ (ಭೂತ–ಭವಿಷ್ಯದ್ವರ್ತಮಾನವೆಲ್ಲವನ್ನೂ) ತಿಳಿದಂಥಾ ಸರ್ವಜ್ಞಮೂರ್ತಿಯಾದ್ದರಿಂದಲೂ ಓಂ(ಈ ಮೂರು ಅರ್ಥಗಳೂ ವಿಶಿಷ್ಟ ಪದ–ಒಟ್ಟಿಗೆಸೇರಿದ–ಓಂ ಎಂಬುದರ ಅರ್ಥ.) ಈಗ ಓಂ ಎಂಬಲ್ಲಿ ಅ + ಉ = ಸೇರಿ ಓ ಎಂದಾಗಿದೆ ಎಂದು ತಿಳಿದು ಅರ್ಥ ಹೇಳುತ್ತಾರೆ — ೪. ಅಕಾರಕ್ಕೆ ಅಧಿಕ ಎಂದರ್ಥ, ಉಕಾರಕ್ಕೆ ಉಚ್ಚ (ಶ್ರೇಷ್ಠ) ಎಂದರ್ಥ; ಆದ್ದರಿಂದ ಓಂ ಎಂದರೆ ಎಲ್ಲರಿಗಿಂತಲೂ ಅತ್ಯಧಿಕವಾಗಿ ಉಚ್ಚ(ಶ್ರೇಷ್ಠ)ನಾಗಿರುವುದರಿಂದ –ಅಧಿಕೋಚ್ಚತ್ವಕಾರಣಾತ್ ಓಂ; ಈ ಅರ್ಥದಲ್ಲಿ ಮಕಾರವನ್ನು ಸೇರಿಸಿರಲಿಲ್ಲ, ೫. ಮಕಾರವೂ ಸೇರಿ ಅ–ಉ–ಮ ಓಂ ಎಂದಾಗಿದೆ ಎಂಬ ಪಕ್ಷದಲ್ಲಿ ಮಕಾರವು ಮಾಧಾತುವಿನ ಮಿತ ಎಂಬುದರ ರೂಪಾಂತರ ಎಂದಿಟ್ಟುಕೊಳ್ಳಬೇಕು; ಆಗ– ಅಧಿಕೋಚ್ಚತ್ವೇನ ವೇದ್ಯೈರ್ಮಿತಮಿತಿ ವಾ ಓಂ; ಅ–ಅಧಿಕವಾಗಿ, ಉ–ಉಚ್ಚ(ಶ್ರೇಷ್ಠ)ನೆಂದು, ಮ–ಸಕಲವೇದಗಳಿಂದ ತಿಳಿಯಲ್ಪಡುವುದರಿಂದ ಓಂ; ೬. ಮಾನಾತ್ ಅಭಿತೋಚ್ಚತ್ವಕಾರಣಾತ್. ಇತ್ಯೇಕಂ ವ್ಯಾಖ್ಯಾನಂ (ವೇದೇಶೀಯ) ಗುಣಗಳ ಸಂಖ್ಯೆಯಲ್ಲಿ ಎಲ್ಲರಿಗಿಂತ ಅನಂತಗುಣ ಅಧಿಕನಾದ್ದರಿಂದಲೂ ಓಂ; ೭. ಅಥವಾ ಓಂ ಅವನಾತ್–ರಕ್ಷಿಸುವುದರಿಂದಲೂ (ಅವಧಾತುವೇ ಓಂಕಾರವಾಗಿದೆ), ಮ–ಮಾನಾತ್ – ಜ್ಞಾನಸ್ವರೂಪ ನಾದ್ದರಿಂದಲೂ ಓಂ; ೮. ಅಕಾರಕ್ಕೆ ಅನಂದಪರಿಪೂರ್ಣನೆಂದೂ, ಉಕಾರಕ್ಕೆ ಓಜತಃ ಬಲರೂಪನಾದ್ದರಿಂದಲೂ, ಮ – ಭರಣಾತ್ – ಜಗತ್ತನ್ನು ಧರಿಸಿರುವುದರಿಂದಲೂ ಓಂ ಎಂದು ಅನೇಕಾರ್ಥಗಳು 'ಸಮನ್ವಯ' ಎಂಬ ಗ್ರಂಥದಲ್ಲಿ ಹೇಳಲ್ಪಟ್ಟಿವೆ. ಹೀಗೆಯೇ 'ಸಾರನಿರ್ಣಯ'ವೆಂಬ ಇನ್ನೊಂದು ಗ್ರಂಥದಲ್ಲೂ ಇನ್ನೂ ಕೆಲವು ಅರ್ಥಗಳನ್ನು ಹೇಳಿದೆ. ಅವನ್ನು ಛಾಂದೋಗ್ಯಭಾಷ್ಯದ ವೇದೇಶೀಯ ಟಿಪ್ಪಣಿಯಿಂದ ತಿಳಿದುಕೊಳ್ಳಬಹುದು.

29. ಓಂಕಾರದ ವ್ಯುತ್ಪತ್ತಿ — ಓಂಕಾರವು ಒಂದು ಅವ್ಯಯವೆಂದು ಖಂಡಾರ್ಥದಲ್ಲಿ ಹೇಳಿದ್ದಾರೆ. ಓಂಕಾರ ಹೇಗೆ ರೂಪವಾಯಿತೆಂಬುದನ್ನು

ನ್ಯಾಯಸುಧಾದಲ್ಲೂ, ಪರಿಮಳದಲ್ಲೂ ವಿಸ್ತಾರವಾಗಿಯೂ, ಛಾಂದೋಗ್ಯ ಖಂಡಾರ್ಥದಲ್ಲಿ ಸಂಗ್ರಹವಾಗಿಯೂ ಹೇಳಿದ್ದಾರೆ. ಓಂಕಾರವು ಅವಧಾತುವಿನಿಂದ ನಿಷ್ಪನ್ನವಾಗಿದೆ. ಆ ಧಾತುವಿಗೆ ಹೋಗು, ರಕ್ಷಿಸು, ಪ್ರಕಾಶಿಸು, ಪ್ರವೇಶಿಸು, ಇರು ಎಂದು ಅನೇಕ ಅರ್ಥಗಳಿವೆ. ಹೀಗೆ ಗತ್ಯಾದ್ಯರ್ಥವುಳ್ಳ ಅವಧಾತುವಿನ ಮೇಲೆ ಮನ್ ಎಂಬ ಪ್ರತ್ಯಯ ಬರಲು, 'ಅವತೇಷ್ಟಿಲೋಪಶ್ಚ' (ಉಣಾದಿ ೧ | ೧೪೨) ಎಂಬ ಸೂತ್ರದಂತೆ ಮನ್ ಪ್ರತ್ಯಯದ ಟಿಗೆ (ಅನ್ ಎಂಬ ಭಾಗಕ್ಕೆ) ಲೋಪ ಬಂದು ಅವ್ + ಮ್ ಎಂದು ಉಳಿಯುತ್ತದೆ. ಮುಂದೆ ''ಜ್ವರ– ತ್ವರ–'' (೬|೪|೨೦) ಎಂಬ ಸೂತ್ರದಂತೆ ಧಾತುವಿನ ವಕಾರಕ್ಕೆ ಊಠ್ (ಊ) ಆದೇಶ ಬಂದು. ಅ–ಊಮ್ ಎಂದಾಗುತ್ತದೆ. ಅಕಾರ–ಊಕಾರಗಳು ಸೇರಿ ಗುಣವಾಗಿ ಓ ಆಗುವುದರಿಂದ 'ಓಮ್' ಎಂಬ ರೂಪ ಸಿದ್ಧಿಸುತ್ತದೆ.

**30. ಪ್ರಣವದ ಎಂಟು ವರ್ಣಗಳು** — ಪ್ರಣವವು ಒಂದೇ ಅಕ್ಷರವಾಗಿ ಕಂಡರೂ ಆದರಲ್ಲಿ ಎಂಟು ವರ್ಣಗಳು ಅಡಗಿವೆಯೆಂದು ತಂತ್ರಸಾರದಲ್ಲಿ ಹೇಳಿದೆ (ಅಧ್ಯಾಯ ೧, ಶ್ಲೋ. ೩) —

**ಅಹಮೇಕೋऽಖಿಲಗುಣೋವಾಚಕಃ ಪ್ರಣವೋ ಮಮ |**
**ಅಕಾರಾದ್ಯತಿಶಾಂತಾಂತಃ ಸೋऽಯಮಷ್ಟಾಕ್ಷರೋ ಮತಃ||**

(ಅರ್ಥ) ಸಮಸ್ತ ಗುಣಪರಿಪೂರ್ಣನಾದವನು ನಾರಾಯಣನಾದ ನಾನೊಬ್ಬನು ಮಾತ್ರವೇ. ನನ್ನನ್ನು ಗುಣಪೂರ್ಣತ್ವ ಹೇಳುವ ಪ್ರಣವವು ಹೇಳುತ್ತದೆ. ಆ ಪ್ರಣವವು ಅಕಾರ, ಉಕಾರ, ಮಕಾರ, ನಾದ, ಬಿಂದು, ಘೋಷ(ಅಥವಾ ಕಲಾ), ಶಾಂತ ಮತ್ತು ಅತಿಶಾಂತ ಎಂಬ ಎಂಟು ವರ್ಣಗಳನ್ನು ಒಳಗೊಂಡಿದೆ. ಈ ಪೈಕಿ ಅಕಾರ, ಉಕಾರ, ಮಕಾರಗಳು ಮಾತ್ರ ನಮಗೆ ಗೋಚರವಾಗಿವೆ, ಮಿಕ್ಕವು ಅಗೋಚರ.

**31. ಪ್ರಣವ ಪ್ರತಿಪಾದ್ಯ ಎಂಟು ಮೂರ್ತಿಗಳು** — ಪ್ರಣವದಲ್ಲಿರುವ ಎಂಟು ವರ್ಣಗಳೂ ಎಂಟು ಭಗವನ್ಮೂರ್ತಿಗಳಿಗೆ ವಾಚಕವಾಗಿವೆ —

**ಸ ವಿಶ್ವ–ತೈಜಸ–ಪ್ರಾಜ್ಞ –ತುರೀಯಾ –ತ್ಮಾಂ –ತರಾತ್ಮನಾಮ್|**
**ಪರಮಾತ್ಮ– ಜ್ಞಾನಾತ್ಮ–ಯುಜಾಂ ಮದ್ರೂಪಾಣಾಂ ಚ ವಾಚಕಃ||**
**( ೧ ಅ. ಶ್ಲೋ.೪)**

(ಅರ್ಥ) ಆ ಪ್ರಣವವು ವಿಶ್ವ, ತೈಜಸ, ಪ್ರಾಜ್ಞ, ತುರೀಯ ಆತ್ಮಾ, ಅಂತರಾತ್ಮಾ ಪರಮಾತ್ಮಾ ಮತ್ತು ಜ್ಞಾನಾತ್ಮಾ ಎಂಬ ನನ್ನ (ಶ್ರೀ ಹರಿಯ) ಬೇರೆ ಮೂರ್ತಿಗಳಿಗೂ ವಾಚಕವಾಗಿದೆ. ಎಂದರೆ ಪ್ರಣವದಲ್ಲಿರುವ ಅಕಾರಾದಿ ಎಂಟು ವರ್ಣಗಳು

ಕ್ರಮವಾಗಿ ವಿಶ್ವಾದಿ ಎಂಟು ಭಗವದ್ರೂಪಗಳನ್ನು ಪ್ರತಿಪಾದಿಸುತ್ತವೆ. 'ಮದ್ರೂಪಾಣಾಂ ಚ' ಎಂಬಲ್ಲಿರುವ ಚಕಾರವು ಈ ವಿಶ್ವಾದಿ ಎಂಟು ಮೂರ್ತಿಗಳು ಭಿನ್ನಭಿನ್ನವಾಗಿ ಕಂಡರೂ ಎಲ್ಲವೂ ಅಭಿನ್ನವೆಂದೂ ಭಗವನ್ಮೂಲ ರೂಪದಂತೆ ಅವೂ ಜ್ಞಾನಾನಂದಮಯ ಮೂರ್ತಿಗಳೇ ಎಂಬುದನ್ನು ಸೂಚಿಸುತ್ತದೆ.

**32.** ಜಪದ ವಿವಿಧ ಅಂಗಗಳು — ಒಂದು ಮಂತ್ರದ ಜಪ ಮಾಡಬೇಕೆಂದರೆ ಅದರಲ್ಲಿ ಅನೇಕ ಅಂಗೋಪಾಂಗಗಳಿವೆ. ಮೊಟ್ಟಮೊದಲು ಆ ಮಂತ್ರಸಿದ್ಧಿಗಾಗಿ ದ್ವಾದಶ ಗುರುಗಳಿಗೆ ನಮಸ್ಕಾರ ಮಾಡಬೇಕು. ಆಮೇಲೆ ಪ್ರಾಣಾಯಾಮ ಮಾಡಿ ಕರನ್ಯಾಸ–ಅಂಗನ್ಯಾಸಗಳನ್ನೂ ವರ್ಣನ್ಯಾಸ–ಅಂಗುಲಿನ್ಯಾಸಗಳನ್ನೂ ಮಾಡಿಕೊಳ್ಳಬೇಕು. ಅನಂತರ ಆ ಮಂತ್ರದ ಋಷಿ, ಛಂದಸ್ಸು ಮತ್ತು ದೇವತೆಗಳನ್ನು ಸ್ಮರಿಸಿ ಮಂತ್ರದೇವತೆಯ ಧ್ಯಾನ ಮಾಡಬೇಕು. ಈಗ ಮಂತ್ರ ಜಪ ಮಾಡಿ ಪುನಃ ಹಿಂದಿನಂತೆ ಪ್ರಾಣಾಯಾಮ, ಕರನ್ಯಾಸ–ಅಂಗನ್ಯಾಸಗಳನ್ನೂ ವರ್ಣನ್ಯಾಸ–ಅಂಗುಲಿನ್ಯಾಸಗಳನ್ನೂ ಮಾಡಿ ಋಷ್ಯಾದಿಗಳನ್ನು ಸ್ಮರಿಸಿ ಧ್ಯಾನ ಶ್ಲೋಕ ಹೇಳಿ ಜಪವನ್ನು ಸಮಾಪ್ತಿ ಮಾಡಬೇಕು. ಆಮೇಲೆ ನೀರನ್ನು ಅಭಿಮಂತ್ರಿಸಿ ಆ ದೇವತೆಗೆ ಅರ್ಘ್ಯ ಕೊಡಬೇಕು. ಇಲ್ಲಿಗೆ ಒಂದು ಮಂತ್ರ ಜಪ ಮುಗಿಯುತ್ತದೆ.

ಆದರೆ ಜಪಾರಂಭ ಮಾಡುವುದಕ್ಕೆ ಮೊದಲೇ ಆಸನ ಶುದ್ಧಿ –ಕರಶುದ್ಧಿಗಳನ್ನು ಮಾಡಿಕೊಂಡು, ನಮ್ಮಲ್ಲಿರುವ ಪಾಪಪುರುಷನನ್ನು ಮಂತ್ರದಿಂದ ಶೋಷಿಸಿ (ಒಣಗಿಸಿ) ದಹನ ಮಾಡಿ ನಮ್ಮ ದೇಹವನ್ನು ಅಮೃತವೃಷ್ಟಿಯಿಂದ ಪವಿತ್ರ ಮಾಡಿಕೊಳ್ಳಬೇಕು. ಈ ವಿಧಾನಗಳೇ ಗುರುಮಂತ್ರ ಎನಿಸಿಕೊಳ್ಳುತ್ತದೆ. ಅದಾದ ಮೇಲೆ ನಮ್ಮ ಸಕಲೇಂದ್ರಿಯಗಳನ್ನೂ ಶುದ್ಧಿಗೊಳಿಸಬೇಕು; ಇದನ್ನೇ ತತ್ತ್ವನ್ಯಾಸ ಎನ್ನುತ್ತಾರೆ. ಆ ಬಳಿಕ ಮಾತೃಕಗಳೆಂಬ ಅಕಾರಾದಿ ಐವತ್ತೊಂದು ಅಕ್ಷರಗಳಿಂದ ನಮ್ಮ ದೇಹದಲ್ಲಿ ನ್ಯಾಸ ಮಾಡಿಕೊಳ್ಳಬೇಕು. ಈ ವಿಧಾನಕ್ಕೆ ಮಾತೃಕಾನ್ಯಾಸ ಎಂಬ ಹೆಸರು. ಹೀಗೆ ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸಗಳನ್ನು ಮಾಡಿಕೊಂಡೇ ಮಂತ್ರ ಜಪ ಆರಂಭಿಸಬೇಕು. ನಾವು 'ಗುರು ಮಂತ್ರ, ತತ್ತ್ವನ್ಯಾಸ, ಮಾತೃಕಾ ನ್ಯಾಸ'ಗಳ ವಿಧಾನವನ್ನು ಆ ಹೆಸರಿನ ಗ್ರಂಥದಲ್ಲಿ ವಿಸ್ತಾರವಾಗಿ ಬರೆದಿದ್ದೇವೆ. ಆ ಗ್ರಂಥವು ಆನಂದ ಪ್ರಿಂಟರ್ಸ್, 25, ಗಾಂಧೀ ಬಜಾರ್, ಬಸವನಗುಡಿ, ಬೆಂಗಳೂರು–560 004 ಇವರಲ್ಲಿ ಮುದ್ರಿತವಾಗಿ ದೊರಕುತ್ತವೆ. ಅದರಲ್ಲಿ ಹೇಳಿದ ವಿಚಾರಗಳನ್ನೇ ಪ್ರಸಕ್ತಿ ಬಂದಾಗ ಈ ಗ್ರಂಥದಲ್ಲೂ ಅಲ್ಲಲ್ಲಿ ಸಂಗ್ರಹಿಸಿ ಹೇಳಿದ್ದೇವೆ.

ಪ್ರಕೃತ ವಂದಿಸಬೇಕಾದ ಆ ದ್ವಾದಶ ಗುರುಗಳು ಯಾರು? ಅವರನ್ನೇಕೆ ವಂದಿಸಬೇಕು? ಎಂಬ ವಿಚಾರ

ಮುಂದಿನ ಖಂಡದಲ್ಲಿ ವರ್ಣಿಸುವೆವು.

**33. ಗುರುನಮಸ್ಕಾರ** — ತಂತ್ರಸಾರದಲ್ಲಿ (೪ನೇ ಅ, ೧೪೬ ಶ್ಲೋ.) ಯಾವ ಯಾವ ಗುರುಗಳಿಗೆ ನಮಸ್ಕಾರ ಮಾಡಬೇಕು? ಏಕೆ ನಮಸ್ಕಾರ ಮಾಡಬೇಕು? ಎಂಬ ವಿಚಾರ ಹೀಗೆ ಹೇಳಿದ್ದಾರೆ —

**ಸ್ಮೃತ್ವಾ ಗುರುಂ ಪೂರ್ವಗುರುಂ ಆದಿ–ಮೂಲ ಗುರುಂ ತಥಾ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್॥**

(ಅರ್ಥ) ನಮ್ಮ ಸಾಕ್ಷಾದ್ಗುರುಗಳನ್ನೂ, ಅವರ (ಗುರುಗಳ) ಗುರುಗಳನ್ನೂ ಎಂದರೆ ಪರಮಗುರುಗಳನ್ನೂ ಆದಿಗುರುಗಳಾದ ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯಗುರುಗಳನ್ನೂ ಮೂಲಗುರುಗಳೆಂಬ ಏಳು ಗುರುಗಳನ್ನೂ ಮಂತ್ರಪ್ರತಿಪಾದ್ಯ ದೇವತೆಯನ್ನೂ ಮುಕ್ತಿಪ್ರದನಾದ ಶ್ರೀ ವಾಸುದೇವನನ್ನೂ–ಹೀಗೆ ಹನ್ನೆರಡು ಗುರುಗಳನ್ನು ಸ್ಮರಿಸಿ ಆರಂಭಿಸಿದರೆ ಆ ವಿದ್ಯೆ ಸಿದ್ಧಿಯಾಗುತ್ತದೆ.

ಪಂಚರಾತ್ರದಲ್ಲಿ ಮೂಲಗುರುಗಳಾರು ಎಂಬುದನ್ನು ಹೀಗೆ ಹೇಳಿದ್ದಾರೆ (ಛಲಾರಿ ಟೀಕೆಯಿಂದ) —

**ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ।**
**ತಥಾ ನಾರಾಯಣಂ ಮೂಲ — ಗುರೂನಾಹುರ್ ವಿಪಶ್ಚಿತಃ॥**

ಕಠಿನ ಶಬ್ದಾರ್ಥ — ವ್ಯಾಸಂ–ವೇದವ್ಯಾಸ ದೇವರನ್ನೂ, ವಾಣೀಂ–ಸರಸ್ವತೀ ದೇವಿಯನ್ನೂ, ವಿಧಿಂ–ಬ್ರಹ್ಮದೇವರನ್ನು (ಚತುರ್ಮುಖ ಬ್ರಹ್ಮನನ್ನು), ರಮಾಂ,–ಲಕ್ಷ್ಮೀದೇವಿಯನ್ನೂ, ಆಹುಃ–ಹೇಳುತ್ತಾರೆ, ವಿಪಶ್ಚಿತಃ–ಜ್ಞಾನಿಗಳು.

(ಅರ್ಥ) ಜ್ಞಾನಿಗಳು ೧. ವೇದವ್ಯಾಸ ಮಹರ್ಷಿಗಳನ್ನೂ, ೨. ಭಾರತೀದೇವಿಯನ್ನೂ, ೩. ಸರಸ್ವತೀ ದೇವಿಯನ್ನೂ, ೪. ಮುಖ್ಯಪ್ರಾಣನೆಂಬ ವಾಯುದೇವರನ್ನೂ, ೫. ಚತುರ್ಮುಖ ಬ್ರಹ್ಮನನ್ನೂ, ೬. ಮಹಾಲಕ್ಷ್ಮಿಯನ್ನೂ ಮತ್ತು ೭ ನಾರಾಯಣನನ್ನೂ — ಈ ಏಳು ಮಂದಿಗಳನ್ನೂ ಮೂಲಗುರುಗಳೆಂದು ಹೇಳುತ್ತಾರೆ.

ಅಂತೂ ಒಟ್ಟಿನಲ್ಲಿ ೧. ನಮಗೆ ವಿದ್ಯ ಉಪದೇಶ ಮಾಡಿದ ಗುರುಗಳು ೨. ಆ ಗುರುಗಳು ಎಂದರೆ ಪರಮಗುರುಗಳು, ೩. ಎಲ್ಲರಿಗೂ ಆದಿಗುರುಗಳಾದ ಶ್ರೀಮನ್ಮಧ್ವಾಚಾರ್ಯರು, ೪. ವೇದವ್ಯಾಸರು, ೫ ಭಾರತೀದೇವಿಯರು, ೬ ಸರಸ್ವತೀದೇವಿಯರು, ೭. ವಾಯುದೇವರು, ೮. ಚತುರ್ಮುಖ ಬ್ರಹ್ಮದೇವರು, ೯. ಮಹಾಲಕ್ಷ್ಮೀ ದೇವಿ, ೧೦. ಶ್ರೀಮನ್ನಾರಾಯಣ, ೧೧. ಆಯಾ ಮಂತ್ರದ ಪ್ರತಿಪಾದ್ಯ

ದೇವತೆ, ೧೨. ಮುಕ್ತಿಪ್ರದಾಯಕನಾದ ವಾಸುದೇವ— ಇವರೇ ದ್ವಾದಶ ಗುರುಗಳು. ಇವರನ್ನು ಸ್ಮರಣೆ ಮಾಡಿ ಪ್ರಾರಂಭಿಸಿದರೆ ಆ ವಿದ್ಯೆ ಅಥವಾ ಜಪ ಸಿದ್ಧಿಯಾಗುತ್ತದೆ. ಆದಕ್ಕಾಗಿಯೇ ಇವರಿಗೆ ಮೊದಲು ವಂದಿಸಬೇಕು.

ಹನ್ನೊಂದನೇ ಸ್ಥಾನ ಮಂತ್ರದೇವತೆ ಮಾತ್ರ ಮಂತ್ರ ಮಂತ್ರಕ್ಕೂ ವ್ಯತ್ಯಾಸವಾಗುತ್ತದೆ. ಮಿಕ್ಕವೆಲ್ಲಾ ಹಾಗೆಯೇ ಅದೇ ಕ್ರಮದಲ್ಲೇ ಇರುತ್ತವೆ. ಪ್ರಣವ ಮಂತ್ರಕ್ಕೆ ಪರಮಾತ್ಮನೇ ದೇವತೆ. ಆದ್ದರಿಂದ ಪ್ರಣವ ಮಂತ್ರ ಆರಂಭಿಸುವುದಕ್ಕೆ ಮೊದಲು ಹೀಗೆ ಗುರು ನಮಸ್ಕಾರ ಮಾಡಿ ಕೈ ಮುಗಿಯಬೇಕು

೧. ಓಂ ಶ್ರೀ ಗುರುಭ್ಯೋ ನಮಃ * । ೨. ಶ್ರೀ ಪರಮಗುರುಭ್ಯೋ ನಮಃ। ೩. ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ । ೪. ಶ್ರೀ ವೇದವ್ಯಾಸಾಯ ನಮಃ। ೫. ಶ್ರೀ ಭಾರತ್ಯೈ ನಮಃ। ೬. ಶ್ರೀ ಸರಸ್ವತ್ಯೈ ನಮಃ। ೭. ಶ್ರೀ ವಾಯವೇ ನಮಃ। ೮. ಶ್ರೀ ಬ್ರಹ್ಮಣೇ ನಮಃ। ೯. ಶ್ರೀ ಮಹಾಲಕ್ಷ್ಮ್ಯೈ ನಮಃ। ೧೦. ಶ್ರೀ ನಾರಾಯಣಾಯ ನಮಃ। ೧೧. ಮಂತ್ರದೇವತಾ ಶ್ರೀ ಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತ† ಶ್ರೀಪರಮಾತ್ಮನೇ ನಮಃ। ೧೨. ಮುಕ್ತಿಪ್ರದಾಯಕ ಶ್ರೀ ವಾಸುದೇವಾಯ ನಮಃ

**34. ಪ್ರಾಣಾಯಾಮದ ವಿಚಾರ**— 'ಪ್ರಾಣಾಯಾಮ' ಎಂಬಲ್ಲಿ ಪ್ರಾಣ, ಆ, ಯಾಮ ಎಂಬ ಮೂರು ಅವಯವಗಳಿವೆ. ಪ್ರಾಣ ಎಂದರೆ ಇಲ್ಲಿ ಉಸಿರು ಅಥವಾ ಶ್ವಾಸ ಎಂದರ್ಥ. ಯಾಮ ಎಂಬುದು 'ಯಮ ನಿಯಮನೇ' ಎಂಬ ಧಾತುವಿನ ಕೃದಂತ ಭಾವನಾಮ, ಆದ್ದರಿಂದ ಯಾಮ ಎಂದರೆ ನಿಗ್ರಹ, ಹತೋಟಿ ಅಥವಾ ಕಂಟ್ರೋಲ್ (control) ಎಂದು ಅರ್ಥ. 'ಆ' ಎಂಬುದು ಉಪಸರ್ಗ, ಆದಕ್ಕೆ 'ಸಮಂತಾತ್'—ಚೆನ್ನಾಗಿ ಎಂದರ್ಥವಿದೆ. ಉಸಿರನ್ನು ಬಿಗಿಹಿಡಿಯುವುದು ಮಾತ್ರವೇ ಪ್ರಾಣಾಯಾಮವಾಗುವುದಿಲ್ಲ — ಆದಕ್ಕೆ ಒಂದು ಕ್ರಮ ಇದೆ. ಆ ಕ್ರಮವು ರೇಚಕ, ಪೂರಕ, ಕುಂಭಕ ಎಂದು ಮೂರು ಬಗೆಯಾಗಿದೆ.

---

* ಅನೇಕರು 'ಶೀ ಗುರುಭ್ಯೋನ್ನಮಃ' ಎಂದು ನಕಾರಕ್ಕೆ ಒತ್ತು ಕೊಟ್ಟು ಹೇಳುತ್ತಾರೆ, ಅದು ಅಪದ್ಧ. ಸಂಸ್ಕೃತ ಸಂಧಿ ನಿಯಮದಂತೆ ವಿಸರ್ಗದ ಹಿಂದೆ ಅಕಾರವಿದ್ದು ಮುಂದೆ ಮೃದುವರ್ಣ ಬಂದರೆ ವಿಸರ್ಗವು ಓಕಾರವಾಗುತ್ತದೆ. ಆದ್ದರಿಂದ 'ಗುರುಭ್ಯೋ ನಮಃ। ಎಂದಾಗಿದೆ, ನ್ನ ಎಂದು ಆಗುವುದಿಲ್ಲ.

† ಇನ್ನು ಮುಂದೆ ಇದನ್ನು ಮ.ಭಾ.ಮು. ಎಂಬ ಸಂಕೇತಾಕ್ಷರಗಳಿಂದ ತೋರಿಸುವೆವು.

**35.** ಪ್ರಾಣಾಯಾಮದ ಮೂರು ಅಂಗಗಳು — ಪ್ರಾಣಾಯಾಮವು ಮೂರು ಅಂಗವುಳ್ಳದ್ದು ಅಥವಾ ಮೂರು ಬಗೆಯಾಗಿದೆಯೆಂಬ ವಿಚಾರ ತಂತ್ರಸಾರದಲ್ಲೇ (೪ ಅಧ್ಯಾಯ, ೧೪೮ ಶ್ಲೋ) ಉಕ್ತವಾಗಿದೆ—

**ರೇಚಕಃ ಪೂರಕಶ್ಚೈವ ಕುಂಭಕಶ್ಚ ತ್ರಿಧಾ ಸ್ಮೃತಃ॥**

ರೇಚಕ ಎಂದರೆ ಹೊರಕ್ಕೆ ಹಾಕುವುದು, ಹೊರಡಿಸುವುದು ಎಂದರ್ಥ. ಆದ್ದರಿಂದ ಒಳಗಿನ ಉಸಿರನ್ನು ಹೊರಕ್ಕೆ ಹೊರಡಿಸುವುದೇ ರೇಚಕ ಎನಿಸುತ್ತದೆ. ಪೂರಕ ಎಂದರೆ ತುಂಬುವುದು ಎಂದರ್ಥ; ಆದ್ದರಿಂದ ಹೊರಗಿನ ಗಾಳಿಯನ್ನು ಒಳಕ್ಕೆ ಎಳೆದುಕೊಳ್ಳುವುದಕ್ಕೇ ಪೂರಕ ಎಂದು ಹೆಸರು. ಕುಂಭಕ ಎಂದರೆ ಸ್ತಂಭನ ಮಾಡುವುದು, ನಿಗ್ರಹಿಸುವುದು ಎಂದರ್ಥ, ಆದ್ದರಿಂದ ಎರಡು ಮೂಗಿನ ಹೊಳ್ಳೆಗಳನ್ನು ಅದುಮಿ ಹಿಡಿದುಕೊಂಡು ಉಸಿರನ್ನು ಕಟ್ಟುವುದಕ್ಕೆ ಕುಂಭಕ ಎಂದು ಹೆಸರು. ರೇಚಕಾದಿಗಳನ್ನು ಹೇಗೆ ಮಾಡಬೇಕೆಂಬುದಕ್ಕೆ ಒಂದು ವಿಧಿಯಿದೆ. ಅದನ್ನು ತಂತ್ರಸಾರದಲ್ಲಿ (೪ ಅ. ೧೭೦ ಶ್ಲೋ.) ಹೀಗೆ ಹೇಳಿದ್ದಾರೆ—

**ರೇಚಯಿತ್ವಾ ದಕ್ಷಿಣತಃ ಪೂರಯಿತ್ವಾ ಚ ವಾಮತಃ।**
**ಕುಂಭಕಶ್ಚ ಸುಷುಮ್ನಾಯಾಂ ವಿಷ್ಣುಂ ವಾಯುಂ ಚ ಸಂಸ್ಮರೇತ್॥**

(ಅರ್ಥ) ಎಡಗಡೆ ಹೊಳ್ಳೆಯನ್ನು ಅದುಮಿಕೊಂಡು ಬಲಮೂಗಿನ ಹೊಳ್ಳೆಯಿಂದಲೇ ರೇಚಕ ಮಾಡಬೇಕು — ಎಂದರೆ ಉಸಿರನ್ನು ಹೊರಕ್ಕೆ ಬಿಡಬೇಕು. ಆಮೇಲೆ ಆ ಬಲ ಹೊಳ್ಳೆಯನ್ನು ಅದುಮಿಕೊಂಡು ಎಡಹೊಳ್ಳೆಯಿಂದಲೇ ಉಸಿರನ್ನು ಒಳಕ್ಕೆ ಎಳೆದುಕೊಳ್ಳಬೇಕು. ಆಮೇಲೆ ಎರಡು ಹೊಳ್ಳೆಗಳನ್ನೂ ಮುಚ್ಚಿಕೊಂಡು ಉಸಿರನ್ನು ಕಟ್ಟಬೇಕು—ಬಿಗಿ ಹಿಡಿಯಬೇಕು, ಇದೇ ಕುಂಭಕ. ಸುಷುಮ್ನಾನಾಡಿ ಎದೆಯ ಮೂಲಕ ಹಾದು ಹೋಗಿದೆ. ಆದ್ದರಿಂದ 'ಸುಷುಮ್ನಾಯಾಂ' ಎಂದು ಹೇಳಿದ್ದಾರೆ. ಸುಮ್ಮನೆ ಉಸಿರು ಬಿಡುವುದು —ಎಳೆಯುವುದು ಮತ್ತು ಕಟ್ಟುವುದು ಇಷ್ಟು ಮಾತ್ರವೇ ಆದರೆ ಪಂಪಿನಂತೆ ಅಥವಾ ತಿದಿಯಂತೆ ಆಗುತ್ತದೆ. ಆದ್ದರಿಂದ ಅದಕ್ಕೆ ಆಧ್ಯಾತ್ಮ ಅರ್ಥಕೊಡುವುದಕ್ಕಾಗಿ ತಂತ್ರಸಾರದಲ್ಲಿ 'ವಿಷ್ಣುಂ ವಾಯುಂ ಚ ಸಂಸ್ಮರೇತ್' ಎಂದು ಹೇಳಿದ್ದಾರೆ. ಎಂದರೆ ಉಸಿರು ಬಿಡುವಾಗಲೂ, ಎಳೆದುಕೊಳ್ಳುವಾಗಲೂ, ಕಟ್ಟುವಾಗಲೂ ವಿಷ್ಣುವನ್ನೂ ವಾಯುದೇವರನ್ನೂ ಸ್ಮರಿಸುತ್ತಾ ಯಾವ ಮಂತ್ರ ಜಪಿಸಬೇಕೋ ಆ ಮಂತ್ರವನ್ನು ಜಪಿಸುತ್ತಿರಬೇಕು.

**36.** ರೇಚಕಾದಿಗಳ ಆಳತೆ — ಸುಮ್ಮನೆ ಉಸಿರುಬಿಡುವುದು ಎಳೆದುಕೊಳ್ಳುವುದು ಕಟ್ಟುವುದು ಇಷ್ಟು ಮಾತ್ರವೇ ಪ್ರಾಣಾಯಾಮ ಎನಿಸುವುದಿಲ್ಲ.

ಆದಕ್ಕೂ ಒಂದು ಅಳತೆ ಇದೆ—ಹಾಗಿದ್ದರೆ ಮಾತ್ರ ಅದು ಪ್ರಾಣಾಯಾಮ ಎನ್ನಿಸುತ್ತದೆ. ಈ ಅಳತೆಯನ್ನೇ ಆಯಾಮ ಎಂಬಲ್ಲಿರುವ 'ಆ' ಅಕ್ಷರ (ಉಪಸರ್ಗ) ಸೂಚಿಸುತ್ತದೆ. ಆ ಅಳತೆಯನ್ನು ತಂತ್ರಸಾರದ (೪ ಅ. ೧೫೮ ಶ್ಲೋ.) 'ದ್ವಿಗುಣೋತ್ತರಂ ರೇಚಕಾದಿ' ಎಂಬ ವಾಕ್ಯ ತಿಳಿಸುತ್ತದೆ. ರೇಚಕದ ಎರಡರಷ್ಟು ಪೂರಕವನ್ನೂ, ಪೂರಕದ ಎರಡರಷ್ಟು ಕುಂಭಕವನ್ನೂ, ಮಾಡಿ ಆಮೇಲೆ ನಿಧಾನವಾಗಿ ಉಸಿರನ್ನು ಬಿಡಬೇಕು. ಉದ್ದಕ್ಕೂ ವಿಷ್ಣುವನ್ನೂ ವಾಯುವನ್ನೂ ಸ್ಮರಿಸುತ್ತಿರಲೇಬೇಕು. ಈ ವಿಧಾನವು ಒಂದೇ ಸಾರಿಗೆ ಬರುವುದಿಲ್ಲವೆಂದೂ ಕ್ರಮವಾಗಿ ಅಭ್ಯಾಸ ಮಾಡಿ ವೃದ್ಧಿ ಮಾಡಬೇಕೆಂದೂ ತಂತ್ರಸಾರದಲ್ಲಿ (೪ ಅ. ೧೪೮–೪೯ ಶ್ಲೋ. ) ಎಚ್ಚರಿಸುತ್ತಾರೆ—

**ದ್ವಿಗುಣೋತ್ತರಂ ರೇಚಕಾದಿ ಷೋಡಶಾದಿ ಕ್ರಮೇಣ ತು।**
**ಕ್ರಮೇಣೈ ವಾಭ್ಯಸೇನ್ ಮಾತ್ರಾ–ವೃದ್ಧಿ ಮೇಕಾಗ್ರಧೀಃ ಪುನಃ ॥**

ರೇಚಕವನ್ನು ಎಂಟು ಮಾತ್ರೆಗಳಿಂದ ಆರಂಭಿಸಿ ಹೆಚ್ಚು ಹೆಚ್ಚಿಸುತ್ತಾ ಹೋಗಬೇಕು. ಅದರಂತೆ ಪೂರಕವನ್ನೂ ಕುಂಭಕವನ್ನೂ ಎರಡೆರಡು ಪಟ್ಟು ಹೆಚ್ಚಿಸುತ್ತಾ ಕ್ರಮವಾಗಿ ಏಕಾಗ್ರಮನಸ್ಸಿನಿಂದ ಬೆಳೆಸಿಕೊಳ್ಳಬೇಕೆಂದು ಹೇಳುತ್ತಾರೆ. ಒಂದು ಹ್ರಸ್ವಸ್ವರ ಹೇಳುವಷ್ಟು ಕಾಲಕ್ಕೆ ಮಾತ್ರೆ ಎಂದು ಹೆಸರು, ಆದ್ದರಿಂದ ಪ್ರಾರಂಭದಲ್ಲಿ ಹದಿನಾರು ಮಾತ್ರೆಯಷ್ಟು ಕಾಲ (ಎಂಟು ಓಂಕಾರ ಹೇಳುವಷ್ಟು ಕಾಲ) ರೇಚಕದಿಂದ ಆರಂಭಿಸಿ, ಮೂವತ್ತೆರಡು ಮಾತ್ರೆ ಪೂರಕವನ್ನು, ಅರವತ್ತ ನಾಲ್ಕು ಕುಂಭಕವನ್ನೂ ಮಾಡಬೇಕು. ಅದೂ ಸಾಧ್ಯವಿಲ್ಲದಿದ್ದರೆ ನಾಲ್ಕು ಮಾತ್ರೆ ಎಂಟು– ಹದಿನಾರರಿಂದ ಆರಂಭಮಾಡಿ ಕ್ರಮವಾಗಿ ಮೂರನ್ನೂ ಬೆಳೆಸಿಕೊಳ್ಳುತ್ತಾ ಹೋಗಬೇಕೆಂದು ಅಭಿಪ್ರಾಯ.

**37. ಪ್ರಾಣಾಯಾಮಕ್ಕೆ ಮಂತ್ರಗಳು**—ಪ್ರಾಣಾಯಾಮ ಮಾಡುವಾಗ ಯಾವ ಯಾವ ಮಂತ್ರಗಳನ್ನು ಹೇಳಿಕೊಳ್ಳಬೇಕೆಂಬುದಕ್ಕೂ ಒಂದು ವಿಧಿಯಿದೆ. ಅದನ್ನು ತಂತ್ರಸಾರದಲ್ಲಿ (೨ ಅ. ಶ್ಲೋ. ೪–೫) ಹೀಗೆ ಹೇಳಿದೆ—

**ತಾರೈಸ್ ತ್ರಿರ್ ದ್ವಾದಶಾವೃತ್ತೈರ್–ದ್ವ್ಯೇಕ –ದ್ವಾದಶಕೇನ ವಾ ।**
**ತತ್ತನ್ಮಂತ್ರೇಣ ವಾ ಕಾರ್ಯೋ ಗಾಯತ್ರ್ಯಾ ದಶತಾರಕೈಃ ॥**

(ಅರ್ಥ) ತಾರೈಃ–ಓಂಕಾರಗಳಿಂದ, ತ್ರಿರ್–ಮೂರಾವರ್ತಿ, ದ್ವಾದಶಾ ವೃತ್ತೈಃ–ಹನ್ನೆರಡು ಜಪ. ದ್ವಿ + ಏಕ -ದ್ವಾದಶಕೇನ– ಒಂದು ಹನ್ನೆರಡರಿಂದ ಅಥವಾ ಎರಡು ಹನ್ನೆರಡರಿಂದ (ಎಂದರೆ ಹನ್ನೆರಡರಿಂದಲೋ ಅಥವಾ ಇಪ್ಪತ್ತನಾಲ್ಕ ರಿಂದಲೋ) ತತ್ತನ್ಮಂತ್ರೇಣ– ಯಾವ ಮಂತ್ರ ಜಪಿಸಬೇಕೋ ಆ ಮಂತ್ರದಿಂದಲೇ

ದಶತಾರಕೈಃ ಗಾಯತ್ರ್ಯಾ – ಹತ್ತು ಓಂಕಾರಗಳಿರುವ ಗಾಯತ್ರಿಯಿಂದ (ಸಂಧ್ಯಾ ವಂದನೆಯಲ್ಲಿ ಹೇಳಿಕೊಳ್ಳುವ –ಓಂ ಭೂಃ ಓಂ ಭುವಃ ಎಂದು ಆರಂಭಿಸಿ– ರಸೋಽಮೃತಂ ಬ್ರಹ್ಮಭೂರ್ಭುವಸ್ಸುವರೋಂ–ಎಂಬ ಮಂತ್ರದಿಂದ).

(ಅರ್ಥ) ಪ್ರಾಣಾಯಾಮವನ್ನು ಹನ್ನೆರಡು ಅಥವಾ ಇಪ್ಪತ್ತನಾಲ್ಕು ಅಥವಾ ಮೂವತ್ತಾರು ಓಂಕಾರಗಳಿಂದಲೂ ಅಥವಾ ಯಾವ ಮಂತ್ರ ಜಪಿಸಬೇಕೋ ಆ ಮಂತ್ರದಿಂದಲೇ ಆಗಲಿ, ಅಥವಾ ಹತ್ತು ಓಂಕಾರಗಳಿರುವ ಓಂ ಭೂಃ ಓಂ ಭುವಃ ಇತ್ಯಾದಿ – 'ಭೂರ್ಭುವಸ್ಸುವರೋಮ್' ಎಂದು ಕೊನೆಯಾಗುವ ಗಾಯತ್ರಿ ಮಂತ್ರದಿಂದಾಗಲಿ ಅಥವಾ ನಾರಾಯಣಾಷ್ಟಾಕ್ಷರ ಮಂತ್ರದಿಂದಾಗಲಿ ಪ್ರಾಣಾಯಾಮವನ್ನು ಮಾಡಬಹುದು. ಆದರೆ ರೇಚಕದ ಎರಡರಷ್ಟು ಪೂರಕವನ್ನೂ ಪೂರಕದ ಎರಡರಷ್ಟು ಕುಂಭಕವನ್ನೂ ಮಾಡಬೇಕು.

ಪ್ರಾಣಾಯಾಮ ಮಾಡುವ ಅನೇಕ ವಿಧಗಳು ಬೇರೆ ಇದ್ದರೂ ಆಚಾರ್ಯರು ಹೇಳಿದ ವಿಧಾನವೇ ಸಿದ್ಧಿಪ್ರದ. ಈ ಕ್ರಮದಲ್ಲಿ ಅಸಿದ್ಧಿ ಎಂಬ ಮಾತೇ ಇಲ್ಲ.

ಈಗ ಪ್ರಸಕ್ತವಾಗಿರುವುದು ಪ್ರಣವ ಮಂತ್ರವೇ ಆದ್ದರಿಂದ ಪ್ರಾಣಾಯಾಮಕ್ಕೆ ಹನ್ನೆರಡು ಓಂಕಾರಗಳನ್ನೇ ಬಳಸಬಹುದು, ಹನ್ನೆರಡು ಕಷ್ಟವಾದರೆ ಪ್ರಾರಂಭದಲ್ಲಿ ನಾಲ್ಕು ಓಂಕಾರಗಳಿಂದ ರೇಚಕ, ಎಂಟರಿಂದ ಪೂರಕ ಮಾಡಿ ಹದಿನಾರು ಓಂಕಾರಗಳಿಂದ ಕುಂಭಕ ಮಾಡಬಹುದು. ಹಾಗೆಯೇ ಅಭ್ಯಾಸ ಮಾಡಿ ಮಾಡಿ ಹೆಚ್ಚು ಹೆಚ್ಚು ಓಂಕಾರಗಳಿಂದ ರೇಚಕಾದಿಗಳನ್ನು ಮಾಡಲು ಪ್ರಯತ್ನ ಪಡಬೇಕು. ಪ್ರಾಣಾಯಾಮ ಮಾಡಿದ ಬಳಿಕ ಕರನ್ಯಾಸ–ಅಂಗನ್ಯಾಸಗಳನ್ನು ಮಾಡಬೇಕು.

**38. ಕರನ್ಯಾಸ– ಅಂಗನ್ಯಾಸಗಳು** – ಪ್ರಾಣಾಯಾಮಕ್ಕೆ ಅಂಗನ್ಯಾಸ– ಕರನ್ಯಾಸ ಹೇಗೆ ಮಾಡಿಕೊಳ್ಳಬೇಕೆಂಬುದನ್ನು ತಂತ್ರಸಾರದಲ್ಲಿ (೧ ಅಧ್ಯಾಯ ಶ್ಲೋ. ೩೦) ಹೀಗೆ ಹೇಳಿದ್ದಾರೆ. –

**ಸಮಾಸ–ವ್ಯಾಸಯೋಗೇನ ವ್ಯಾಹೃತೀನಾಂ ಚತುಷ್ಟಯಮ್।**
**ಸತ್ಯಂ ಚಾಂಗಾನಿ ತಾರಸ್ಯ..........**

(ಅರ್ಥ) ಭೂಃ, ಭುವಃ, ಸುವಃ (ಅಥವಾ ಸ್ವಃ) ಎಂಬುವು ಬಿಡಿ ಬಿಡಿಯಾದ (ವ್ಯಾಸಯೋಗೇನ) ವ್ಯಾಹೃತಿಗಳು. ಭೂರ್ಭುವಸ್ಸುವಃ ಎಂಬುದು ಒಟ್ಟು ಸೇರಿದ (ಸಮಾಸಯೋಗೇನ) ವ್ಯಾಹೃತಿ. ಸತ್ಯಂ ಎಂಬುದರಿಂದಲೂ ಸೇರಿ ಪಂಚಾಂಗನ್ಯಾಸ ಮಾಡಿಕೊಳ್ಳಬೇಕು.

ತೈತ್ತಿರೀಯೋಪನಿಷದ್ಭಾಷ್ಯದಲ್ಲಿ ಭೂರಾದಿ ವ್ಯಾಹೃತಿಗಳಿಗೆ ಕ್ರಮವಾಗಿ ಅಗ್ನಿ, ವಾಯು ಮತ್ತು ಸೂರ್ಯರೂ, ಒಟ್ಟು ಸೇರಿದ ಭೂರ್ಭುವಸ್ಸುವಃ ಎಂಬುದಕ್ಕೆ

ಬ್ರಹ್ಮನೂ (ಪ್ರಜಾಪತಿಯೂ) ಅಭಿಮಾನಿಗಳೆಂದೂ, ಅವರಲ್ಲಿ ಕ್ರಮವಾಗಿ ಅನಿರುದ್ಧಾದಿ ಚತುರ್ಮೂರ್ತಿಗಳು ನಿಯಮಕರಾಗಿರುತ್ತಾರೆಂದೂ ಹೇಳಿದೆ. ಆದ್ದರಿಂದ ಆ ವ್ಯಾಹೃತಿಮಂತ್ರಗಳು ಹೀಗೆ ವ್ಯತ್ಯಾಸಹೊಂದುತ್ತವೆ–ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ, ಓಂ ಭುವಃ ವಾಯ್ವಾತ್ಮನೇ ಶ್ರೀಪ್ರದ್ಯುಮ್ನಾಯ ಓಂ ಸುವಃ ಸೂರ್ಯಾತ್ಮನೇ ಶ್ರೀ ಸಂಕರ್ಷಣಾಯ, ಓಂ ಭೂರ್ಭುವಸ್ಸುವಃ ಪ್ರಜಾಪತ್ಯಾತ್ಮನೇ ಶ್ರೀವಾಸುದೇವಾಯ, ಓಂ ಸತ್ಯಂ ನಾರಾಯಣಾಯ. ಈ ಐದು ಮಂತ್ರಗಳಿಂದಲೇ ಕರನ್ಯಾಸವನ್ನೂ ಅಂಗನ್ಯಾಸವನ್ನೂ ಮಾಡಿಕೊಳ್ಳಬೇಕು. ಕರನ್ಯಾಸದಲ್ಲಿ ಎಲ್ಲದಕ್ಕೂ 'ನಮಃ' ಎಂದು ಹೇಳಬೇಕು. ಈಗ ಪ್ರಣವ ಮಂತ್ರದ ಕರನ್ಯಾಸವನ್ನೂ ಅಂಗನ್ಯಾಸವನ್ನೂ ಮಾಡುವ ವಿಧಾನವನ್ನು ಕೆಳಗೆ ತೋರಿಸಿದೆ.

## ಕರನ್ಯಾಸಃ

ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ ಅಂಗುಷ್ಠಾಭ್ಯಾಂ ನಮಃ ।

ಓಂ ಭುವಃ ವಾಯ್ವಾತ್ಮನೇ ಶ್ರೀಪ್ರದ್ಯುಮ್ನಾಯ ತರ್ಜನೀಭ್ಯಾಂ ನಮಃ ।

ಓಂ ಸುವಃ (ಅಥವಾ ಸ್ವಃ) ಸೂರ್ಯಾತ್ಮನೇ ಶ್ರೀ ಸಂಕರ್ಷಣಾಯ
ಮಧ್ಯಮಾಭ್ಯಾಂ ನಮಃ ।

ಓಂ ಭೂರ್ಭುವಸ್ಸುವಃ ಪ್ರಜಾಪತ್ಯಾತ್ಮನೇ ಶ್ರೀವಾಸುದೇವಾಯ
ಅನಾಮಿಕಾಭ್ಯಾಂ ನಮಃ ।

ಓಂ ಸತ್ಯಂ ನಾರಾಯಣಾಯ ಕನಿಷ್ಠಿಕಾಭ್ಯಾಂ ನಮಃ।

## ಅಂಗನ್ಯಾಸಃ

ಓಂ ಭೂಃ ಅಗ್ನ್ಯಾತ್ಮನೇ ಶ್ರೀಅನಿರುದ್ಧಾಯ ಹೃದಯಾಯ ನಮಃ

ಓಂ ಭುವಃ ವಾಯ್ವಾತ್ಮನೇ ಶ್ರೀಪ್ರದ್ಯುಮ್ನಾಯ ಶಿರಸೇ ಸ್ವಾಹಾ

ಓಂ ಸುವಃ ಸೂರ್ಯಾತ್ಮನೇ ಶ್ರೀ ಸಂಕರ್ಷಣಾಯ ಶಿಖಾಯೈ ವಷಟ್

ಓಂ ಭೂರ್ಭುವಸ್ಸುವಃ ಪ್ರಜಾಪತ್ಯಾತ್ಮನೇ ಶ್ರೀ ವಾಸುದೇವಾಯ
ಕವಚಾಯ ಹುಮ್

ಓಂ ಸತ್ಯಂ ನಾರಾಯಣಾಯ ಅಸ್ತ್ರಾಯ ಫಟ್

ಓಂ ಭೂರ್ಭುವಸ್ಸುವರೋಮ್

(ಪ್ರಾರಂಭದಲ್ಲಿ) ಇತಿ ದಿಗ್ಬಂಧಃ

(ಮುಗಿಸುವಾಗ)ಇತಿ ದಿಙ್ಮುಖಃ

ಸೂಚನೆ — ಕೆಲವು ಪುಸ್ತಕಗಳಲ್ಲಿ ಅಂಗನ್ಯಾಸವನ್ನು ಮಾತ್ರ ಕೊಟ್ಟು ಕರನ್ಯಾಸವನ್ನು ತೋರಿಸಿರುವುದೇ ಇಲ್ಲ. ಆದರೆ ಜಪಕ್ಕೆ ಅಂಗನ್ಯಾಸ ಹೇಗೋ ಕರನ್ಯಾಸವೂ ಹಾಗೆಯೇ ಅತ್ಯವಶ್ಯಕ ಮಾಡಿಕೊಳ್ಳಬೇಕಾದ ಅಂಗವಾದ್ದರಿಂದ ಮರೆಯದೆ ಎಲ್ಲರೂ ಕರನ್ಯಾಸವನ್ನೂ ಮಾಡಿಕೊಳ್ಳಬೇಕು.

ಅಲ್ಲದೆ 'ನ್ಯಸನೀಯಂ ಚ ತತ್ತದ್ವರ್ಣದೇವತಾಧ್ಯಾನ ಪೂರ್ವಕಮ್' ಎಂದು ಆಚಾರ್ಯರು ಮುಂದೆ ವರ್ಣನ್ಯಾಸ ವಿಧಾನ ಹೇಳುವಾಗ ಹೇಳಿದ್ದಾರೆ. ಅದು ಉಪಲಕ್ಷಣ ಎಂದಿಟ್ಟುಕೊಂಡು ಅಂಗನ್ಯಾಸ–ಕರನ್ಯಾಸಗಳನ್ನು ಮಾಡಿಕೊಳ್ಳುವುದಕ್ಕೆ ಮೊದಲೇ ವಾಸುದೇವಾದಿ ಮೂರ್ತಿಗಳ ಧ್ಯಾನಶ್ಲೋಕ ಹೇಳಿಕೊಳ್ಳಬೇಕು.

**39. ವಾಸುದೇವಾದಿ ಚತುರ್ಮೂರ್ತಿಗಳ ಧ್ಯಾನಶ್ಲೋಕ —**

ತಂತ್ರಸಾರದಲ್ಲಿ (೧ ಅ. ೨೨–೨೪ ಶ್ಲೋ.) ಈ ಧ್ಯಾನಶ್ಲೋಕಗಳನ್ನು ಕೊಟ್ಟಿದೆ.

ವಾಸುದೇವಾದಿಕಾಃ ಶುಕ್ಲ–ರಕ್ತಪೀತಾಸಿತೋಜ್ವಲಾಃ ॥ ೨೨ ॥
ಚಕ್ರಶಂಖಗದಾಬ್ಜೇತಃ ಪ್ರಥಮೋ ಮುಸಲೀಹಲೀ
ಸಚಕ್ರಶಂಖಸ್ತ್ವಪರಸ್ ತೃತೀಯಃ ಶಾರ್ಙ್ಗಬಾಣವಾನ್ ॥೨೩॥
ಸಶಂಖಚಕ್ರಸ್ತುರ್ಯಸ್ತು ಚಕ್ರ–ಶಂಖಾಸಿ –ಚರ್ಮವಾನ್॥

ಸೂಚನೆ — ಇದು ಶುದ್ಧಪಾಠ, ಶಂಖ–ಚಕ್ರ, ಚಕ್ರ–ಶಂಖ ಎಂಬುದರಲ್ಲಿ ಅನೇಕರು ವ್ಯತ್ಯಾಸ ಮಾಡಿ ಹಿಂದೆ ಮುಂದೆ ಮಾಡಿಕೊಂಡು ಹೇಳುತ್ತಾರಲ್ಲದೆ ಹಾಗೆಯೇ ಬರೆದೂಬಿಡುತ್ತಾರೆ. ಆದರೆ ಅನೇಕರಿಗೆ ಅರ್ಥಾನುಸಂಧಾನುವಿಲ್ಲದಿರುವುದರಿಂದ ಹೀಗೆ ವ್ಯತ್ಯಾಸ ಮಾಡಿಕೊಳ್ಳುತ್ತಾರೆ. ಬನ್ನಂಜೆ ಗೋವಿಂದಾಚಾರ್ಯರ ಪುಸ್ತಕದಲ್ಲಿಯೂ ಈ ಪಾಠವನ್ನೇ ಕೊಟ್ಟಿದ್ದಾರೆ. ಉತ್ತರಾದಿ ಮಠದ ಸರ್ವಮೂಲ ಪಾಠದಲ್ಲಿ ಮೂರನೇ ಪಂಕ್ತಿಯು 'ಸಶಂಖ ಚಕ್ರಸ್' ಎಂದೂ ನಾಲ್ಕನೇ ಪಂಕ್ತಿಯು 'ಸಚಕ್ರಶಂಖಸ್ತುರ್ಯಸ್ತು ಚಕ್ರ ಶಂಖಾಸಿಚರ್ಮವಾನ್' ಎಂದೂ ಇದೆ. ಬೆಳಗಾಂ ಪುಸ್ತಕದಲ್ಲಿ ಮೂರನೇ ಪಂಕ್ತಿಯು 'ಸಶಂಖ ಚಕ್ರಸ್' ಎಂದಿದ್ದು ನಾಲ್ಕನೇ ಪಂಕ್ತಿಯೂ 'ಸಶಂಖಚಕ್ರ ಸ್ತುರ್ಯಸ್ತು ಚಕ್ರಶಂಖಾಸಿ' ಎಂದಿದೆ. ಮಾಧ್ವಮಂತ್ರ ರತ್ನಾಕರದಲ್ಲೇ ಕೆಳಗೆ ಸಂಕರ್ಷಣಃ ಚಕ್ರಶಂಖ ಮುಸಲಾಹಲವಾನ್' ಎಂದು ಅರ್ಥ ಕೊಟ್ಟಿದ್ದರೂ ಮೇಲೆ 'ಸಶಂಖ ಚಕ್ರ' ಎಂದು ಅದಕ್ಕೆ ವಿರುದ್ಧವಾಗಿಯೇ ಪಾಠಕೊಟ್ಟಿದ್ದಾರೆ. ಹೀಗೆಯೇ ಕೆಳಗೆ 'ತೃತೀಯಃ ಪ್ರದ್ಯುಮ್ನಃ ಶಂಖಚಕ್ರಶಾರ್ಙ್ಗಬಾಣವಾನ್' ಎಂದು ಅರ್ಥ ಕೊಟ್ಟಿದ್ದರೂ ಮೇಲೆ 'ಸಚಕ್ರಸ್ತುರ್ಯಸ್ತು' ಎಂದು ಪುನಃ ತಪ್ಪುಪಾಠವನ್ನೇ ಕೊಟ್ಟಿದ್ದಾರೆ. ಆದ್ದರಿಂದ ಮೇಲಿನ ಪಾಠವನ್ನೇ ಸರಿಯಾಗಿ ಅರ್ಥ ತಿಳಿದುಕೊಂಡು ಮಾಡುವುದೇ ಮುಖ್ಯವೆಂದು ಹೇಳಬಯಸುತ್ತೇವೆ.

(ಅರ್ಥ) ವಾಸುದೇವಾದಿಕಾಃ— ವಾಸುದೇವ, ಸಂಕರ್ಷಣ ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ನಾಲ್ಕು ಭಗವನ್ಮೂರ್ತಿಗಳು ಕ್ರಮವಾಗಿ ಶುಕ್ಲ (ಬಿಳಿ), ರಕ್ತ (ಕೆಂಪು), ಪೀತ (ಹಳದಿ) ಮತ್ತು ಅಸಿತ (ನೀಲಿ) ಬಣ್ಣದಿಂದ ಉಜ್ವಲಾಃ– ಪ್ರಕಾಶಿಸುತ್ತಿರುತ್ತವೆ. ಈಗ ಆಯುಧಗಳನ್ನು ಹೇಳುತ್ತಾರೆ. ಆಯುಧಗಳನ್ನು ಹೇಳುವಾಗ ಯಾವಾಗಲೂ (ಮೇಲುಗಡೆಯ ಬಲಗೈಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿಯೇ ಗ್ರಹಣಮಾಡಬೇಕು. ಆದರಂತೆ ಶುಕ್ಲ (ಬಿಳೀ) ವರ್ಣದ ವಾಸುದೇವನು ಮೇಲುಗಡೆ ಬಲಗೈಯಲ್ಲಿ ಚಕ್ರವನ್ನೂ ಮೇಲುಗಡೆ ಎಡಗೈಯಲ್ಲಿ ಶಂಖವನ್ನೂ ಕೆಳಗಡೆ ಎಡಗೈಯಲ್ಲಿ ಗದೆಯನ್ನೂ ಕೆಳಗಿನ ಬಲಗೈಯಲ್ಲಿ ಪದ್ಮವನ್ನೂ ಧರಿಸಿದ್ದಾನೆಂದು ಧ್ಯಾನ ಮಾಡಬೇಕು. ಅಪರಃ— ಇನ್ನೊಬ್ಬ ಸಂಕರ್ಷಣನು (ರಕ್ತವರ್ಣ) ಕ್ರಮವಾಗಿ ಚಕ್ರ–ಶಂಖ, ಮುಸಲ (ಒನಕೆ), ಹಲ(ನೇಗಿಲು)ಗಳನ್ನೂ, ತೃತೀಯಃ– ಮೂರನೆಯ (ಹಳದಿ ಬಣ್ಣದ) ಪ್ರದ್ಯುಮ್ನನು ಶಂಖ–ಚಕ್ರ–ಶಾರ್ಙ್ಗ–ಧನುಸ್ಸು ಮತ್ತು ಬಾಣಗಳನ್ನೂ, ತುರ್ಯಸ್ತು–ನಾಲ್ಕನೆಯ (ನೀಲವರ್ಣದ) ಅನಿರುದ್ಧನು ಚಕ್ರ ಶಂಖ ಅಸಿ (ಖಡ್ಗ) ಚರ್ಮಗಳನ್ನು ಧರಿಸಿದ್ದಾರೆಂದೂ ಧ್ಯಾನ ಮಾಡಬೇಕು.

**ಸೂಚನೆ** — ಅಷ್ಟಮಹಾಮಂತ್ರ ಜಪ ಮಾಡುವಾಗ ಈ ಧ್ಯಾನ ಶ್ಲೋಕಗಳನ್ನು ಸುಮಾರು ಹದಿನಾರಾವರ್ತಿ ಹೇಳಿಕೊಳ್ಳಬೇಕಾಗುತ್ತದೆ. ಒಂದೇ ದಿನ ಎಂಟೂ ಮಂತ್ರಗಳನ್ನು ಮಾಡುವುದಿದ್ದರೆ ಇದನ್ನು ಮೊದಲಲ್ಲಿ ಕಡೆಯಲ್ಲಿ ಮಾತ್ರ ಹೇಳಿಕೊಂಡು ಮಧ್ಯದಲ್ಲೆಲ್ಲಾ ಬಿಟ್ಟುಬಿಡುವುದು ಸೂಕ್ತವೆಂದು ನನ್ನ ಸಲಹೆ. ಇಲ್ಲದಿದ್ದರೆ ಇದರಿಂದಲೇ ಬಹಳ ಹೊತ್ತು ಕಳೆದು ಹೋಗುತ್ತದೆ.

ಈ ಧ್ಯಾನಶ್ಲೋಕ ಹೇಳಿಕೊಂಡ ಬಳಿಕವೇ ಕರನ್ಯಾಸವನ್ನೂ ಅಂಗನ್ಯಾಸವನ್ನೂ ಮಾಡಬೇಕು. ಅಂಗನ್ಯಾಸ ಮಾಡಿದ ಬಳಿಕ ಪ್ರಣವಮಂತ್ರದ ವರ್ಣನ್ಯಾಸ ಮಾಡಬೇಕು. ಈಗ ಆ ವಿಚಾರಕ್ಕೆ ಹೋಗೋಣ.

**40.** ಪ್ರಣವದ ವರ್ಣನ್ಯಾಸ — ಖಂಡ 30ರಲ್ಲಿ ಹೇಳಿದಂತೆ ಪ್ರಣವದಲ್ಲಿ ಎಂಟು ವರ್ಣಗಳಿದ್ದರೂ ಅವುಗಳಲ್ಲಿ ಅಕಾರ–ಉಕಾರ–ಮಕಾರಗಳೆಂಬ ಮೂರು ವರ್ಣಗಳು ಮಾತ್ರವೇ ನಮಗೆಲ್ಲ ಗೋಚರವಾಗುತ್ತಿರುವುದರಿಂದ ಆ ಮೂರು ವರ್ಣಗಳಿಂದ ಮಾತ್ರವೇ ವರ್ಣನ್ಯಾಸ ಮಾಡಬೇಕೆಂದು ಹೇಳಿ ಆ ನ್ಯಾಸ ಮಾಡಿಕೊಳ್ಳಬೇಕಾದ ಆ ಮೂರು ಅಂಗಗಳನ್ನು ತಂತ್ರಸಾರವು (೧ ಅ. ೩೫ ಶ್ಲೋ.) ವಿಧಿಸುತ್ತದೆ —

**ಆದಿ ವರ್ಣತ್ರಯಂ ನಾಭಿ–ಹೃಚ್ಛಿರಸ್ಸು ಯಥಾಕ್ರಮಮ್ ।**
**ನ್ಯಸನೀಯಂ ಚ ತದ್ವರ್ಣ–ದೇವತಾಧ್ಯಾನಪೂರ್ವಕಮ್ ॥**

(ಅರ್ಥ) ಪ್ರಣವದ ಎಂಟು ವರ್ಣಗಳ ಪೈಕಿ ಮೊದಲನೆಯ ಮೂರು ವರ್ಣಗಳನ್ನು ಮಾತ್ರವೇ ಯಥಾಕ್ರಮವಾಗಿ ನಾಭಿ–ಹೃದಯ–ಶಿರಸ್ಸುಗಳಲ್ಲಿ — ಆ ಮೂರುತಿಗಳ ಧ್ಯಾನಪೂರ್ವಕವಾಗಿ ಮಾಡಿಕೊಳ್ಳಬೇಕು. ಇಲ್ಲಿ ಕೊಟ್ಟಿರುವ

ನಾಭಿ–ಹೃದಯ–ಶಿರಸ್ಸು ಎಂಬುದು ಲಯಕ್ರಮ. ಕೇವಲ ಒಂದು ನ್ಯಾಸ ಮಾಡಿಕೊಂಡಾಗ ಇದು ಸಂನ್ಯಾಸಿಗಳ ಕ್ರಮವಾಗುತ್ತದೆ. ಇದಕ್ಕೆ ವಿರುದ್ಧವಾದ ಶಿರಸ್ಸು–ಹೃದಯ–ನಾಭಿ ಎಂಬ ಸೃಷ್ಟಿ ಕ್ರಮವು ಬ್ರಹ್ಮಚಾರಿಗಳಿಗೆ ಯೋಗ್ಯ (ಒಂದೇ ನ್ಯಾಸ ಮಾಡಿಕೊಂಡರೆ). ಅದೇ ರೀತಿ ಶಿರಸ್ಸು–ನಾಭಿ–ಹೃದಯ ಎಂಬ ಸ್ಥಿತಿ ಕ್ರಮವು ಒಂದೇ ನ್ಯಾಸ ಮಾಡಿಕೊಂಡಾಗ ಗೃಹಸ್ಥರಿಗೆ ಯೋಗ್ಯ. ಯಾವ ಮಂತ್ರ ಪುಸ್ತಕಗಳಲ್ಲೂ ಈ ಮೂರು ಕ್ರಮವನ್ನೂ ಕೊಟ್ಟಿಲ್ಲ. ಎಲ್ಲರೂ ನಾಲ್ಕು ನಾಲ್ಕು ನ್ಯಾಸಗಳನ್ನು ಮಾಡಿಕೊಳ್ಳುವುದು ಉತ್ತಮ ಪಕ್ಷ. (ಖಂಡ 12ನೋಡಿ). ಆ ಕ್ರಮವನ್ನು ಮುಂದಿನ 41ನೇ ಖಂಡದಲ್ಲಿ ತೋರಿಸುವೆವು. ಆದರೆ ಪ್ರಾರಂಭದಲ್ಲಿ ಚೆನ್ನಾಗಿ ರೂಢಿಯಾಗುವವರೆಗೆ ಒಂದೊಂದು ನ್ಯಾಸವನ್ನೇ ಮಾಡಿಕೊಂಡರೇ ಸಾಕು. ಅಭ್ಯಾಸವಾದ ಬಳಿಕ ನಾಲ್ಕನ್ನು ಮಾಡುವುದು ಸುಲಭವಾಗುವುದು. ಆದರೆ ವರ್ಣನ್ಯಾಸ ಮಾಡಿಕೊಳ್ಳುವುದಕ್ಕೆ ಮೊದಲೇ ವರ್ಣಮೂರ್ತಿಗಳಾದ ವಿಶ್ವಾದಿ ಮೂರ್ತಿಗಳ ಧ್ಯಾನ ಮಾಡಬೇಕು. ಆ ಧ್ಯಾನಶ್ಲೋಕವನ್ನು ತಂತ್ರಸಾರದಲ್ಲಿ (೧ನೇ ಅಧ್ಯಾಯ ೨೦–೨೧ ಶ್ಲೋ.) ಕೊಟ್ಟಿದೆ.

**40.ಎ. ವಿಶ್ವಾದಿ ಮೂರ್ತಿಗಳ ಧ್ಯಾನಶ್ಲೋಕ**—ಆ ಧ್ಯಾನ ಶ್ಲೋಕವು ಹೀಗಿದೆ—

ಮೂರ್ತಯೋऽಷ್ಟಾವಪಿ ಧ್ಯೇಯಾಶ್ ಚಕ್ರ–ಶಂಖ–ವರಾಭಯೈಃ ।
ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ॥

(ಅರ್ಥ) ಅಷ್ಟಾವಪಿ ಮೂರ್ತಯಃ– ವಿಶ್ವಾದಿ ಅಷ್ಟಮೂರ್ತಿಗಳು (ಖಂಡ 31 ನೋಡಿ), ಚಕ್ರ–ಶಂಖ–ವರಾಭಯೈಃ ಯುಕ್ತಾಃ– ಬಲಗೈಯಲ್ಲಿ ಚಕ್ರವನ್ನೂ, ಮೇಲ್ಭಾಗದ ಎಡಗೈಯಲ್ಲಿ ಶಂಖವನ್ನೂ, ಕೆಳಗಡೆಯ ಎಡಗೈಯಲ್ಲಿ ವರಮುದ್ರೆಯನ್ನೂ, ಕೆಳಗಿನ ಬಲಗೈಯಲ್ಲಿ ಅಭಯ ಮುದ್ರೆಯನ್ನೂ ಧರಿಸಿವೆ. ಪ್ರದೀಪವರ್ಣಾಶ್ಚ ಎಂಬುದಕ್ಕೆ ಎರಡು ವಿಧವಾಗಿ ಅರ್ಥ; ಹೇಳಿದ್ದಾರೆ—ಪ್ರದೀಪದಂತೆ ಬೆಳ್ಳಗೆ ಇವೆಯೆಂದು ಒಂದು ಅರ್ಥ ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪು ಬಣ್ಣದಿಂದ ಪ್ರಕಾಶಿಸುತ್ತವೆ ಎಂದು ಎರಡನೇ ಅರ್ಥ. ಅಲ್ಲದೆ ಅವೆಲ್ಲವೂ ಕಿರೀಟ–ಕುಂಡಲ–ಕಡಗ–ಹಾರಾದಿ ಸಕಲಾಭರಣಗಳನ್ನೂ ಧರಿಸಿವೆಯೆಂದು ಧ್ಯಾನ ಮಾಡಬೇಕು.

ತಿರುಪತಿಯ ಶ್ರೀನಿವಾಸನ ಬಲಗೈಯಂತೆ ಅಂಗೈಯನ್ನು ಕೆಳಮುಖವಾಗಿ ಹಿಡಿದುಕೊಂಡರೆ ಅದು ವರ ಮುದ್ರೆ ಅಥವಾ ವರ ಹಸ್ತ ಎನ್ನಿಸುತ್ತದೆ. ಅದೇ ಬಿಚ್ಚಿದ ಕೈಯನ್ನು ಮೇಲ್ಮುಖವಾಗಿ ಹಿಡಿದುಕೊಂಡರೆ ಅಭಯ ಮುದ್ರೆ ಅಥವಾ ಅಭಯ ಹಸ್ತ ಎನ್ನುತ್ತಾರೆ.

ಹೀಗೆ ಧ್ಯಾನ ಶ್ಲೋಕ ಹೇಳಿಕೊಂಡ ಬಳಿಕ ವರ್ಣನ್ಯಾಸ ಮಾಡಬೇಕು. ವರ್ಣನ್ಯಾಸದ ಸೃಷ್ಟಿ–ಸ್ಥಿತಿ–ಲಯ ಕ್ರಮಗಳನ್ನು ಇಲ್ಲಿ ತೋರಿಸಿದೆ. ಒಂದೊಂದು ನ್ಯಾಸವನ್ನಾಗಲಿ ನಾಲ್ಕು ನ್ಯಾಸಗಳನ್ನಾಗಲಿ ಯಥಾಶಕ್ತಿ ಮಾಡಿಕೊಳ್ಳಬಹುದು.

**41.** ಪ್ರಣವದ ವರ್ಣನ್ಯಾಸದ ಮೂರು ಕ್ರಮಗಳು – ಕೆಳಗೆ ಹೆಬ್ಬೆಟ್ಟಿನಿಂದ ಕಿರಿಬೆರಳಿನವರೆಗೆ ಐದು ಬೆಟ್ಟುಗಳನ್ನು 1, 2, 3, ಇತ್ಯಾದಿ ಸಂಖ್ಯೆಗಳಿಂದ ಸೂಚಿಸಲಾಗಿದೆ. ವರ್ಣನ್ಯಾಸವನ್ನು ಬಲಗೈಯಿಂದಲೇ, ಆಯಾ ಅಂಕಿಗಳು ತೋರಿಸುವ ಬೆಟ್ಟುಗಳಿಂದ ಸೂಚಿತ ಸ್ಥಾನಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕು.

| ಹೇಳಬೇಕಾದ ಮಂತ್ರ | ಸೃಷ್ಟಿ ಕ್ರಮ ಅಂಗ–ಬೆಟ್ಟು | ಸ್ಥಿತಿ ಕ್ರಮ ಅಂಗ–ಬೆಟ್ಟು | ಲಯ ಕ್ರಮ ಅಂಗಬೆಟ್ಟು |
|---|---|---|---|
| ೧. ಓಂ ಅಂ ವಿಶ್ವಾಯ ನಮಃ | ಶಿರಸ್ಸು–3 | ಶಿರಸ್ಸು೦೩ | ನಾಭಿ–2–5/1 |
| ೨. ಓಂ ಉಂ ತೈಜಸಾಯ ನಮಃ | ಹೃದಯ–1 + 5 | ನಾಬಿ–2–5/1 | ಹೃದಯ–1 + 5 |
| ೩. ಓಂ ಮಂ ಪ್ರಾಜ್ಞಾಯ ನಮಃ | ನಾಭಿ 2–5/1 | ಹೃದಯ ೧ಒ೫ | ಶಿರಸ್ಸು 3 |

**42.** ಅಂಗುಲಿನ್ಯಾಸ – ಬಲಗೈಯಲ್ಲಿ ನಾಲ್ಕು ಬೆಟ್ಟುಗಳಿವೆ, ಎಡಗೈಯಲ್ಲೂ ನಾಲ್ಕು ಬೆಟ್ಟುಗಳಿವೆ. ಬಲಗೈ ಹೆಬ್ಬೆಟ್ಟಿನಿಂದ ತರ್ಜನ್ಯಾದಿ ನಾಲ್ಕು ಬೆಟ್ಟುಗಳನ್ನು ಮುಟ್ಟಿಕೊಳ್ಳುತ್ತಾ ೧. ಓಂ ಅಂ ವಿಶ್ವಾಯ ನಮಃ, ೨. ಓಂ ಉಂ ತೈಜಸಾಯ ನಮಃ, ೩. ಓಂ ಮಂ ಪ್ರಾಜ್ಞಾಯ ನಮಃ, ೪. ಓಂ ನಾದಾಯ ತುರ್ಯಾಯ ನಮಃ ಎಂದು ನ್ಯಾಸ ಮಾಡಿಕೊಂಡು ಹಾಗೆಯೇ ಎಡಗೈ ಕಿರಿ ಬೆಟ್ಟಿನಿಂದ ತರ್ಜನೀವರೆಗೆ ಎಡ ಹೆಬ್ಬೆಟ್ಟಿನಿಂದ, ೫. ಓಂ ಬಿಂದವೇ ಆತ್ಮನೇ ನಮಃ, ೬. ಓಂ ಘೋಷಾಯ (ಅಥವಾ ಕಲಾಯೈ) ಅಂತರಾತ್ಮನೇ ನಮಃ, ೭. ಓಂ ಶಾಂತಾಯ ಪರಮಾತ್ಮನೇ ನಮಃ, ೮. ಓಂ ಅತಿಶಾಂತಾಯ ಜ್ಞಾನಾತ್ಮನೇ ನಮಃ ಎಂದು ನ್ಯಾಸ ಮಾಡಿಕೊಳ್ಳುವುದು ಬ್ರಹ್ಮಚಾರಿಗಳಿಗೆ. ಅಂಗುಲಿನ್ಯಾಸದ ಸೃಷ್ಟಿ ಕ್ರಮ ಬಲಗೈಯಲ್ಲಿ ಮೇಲಿನಂತೆಯೇ ಮಾಡಿಕೊಂಡು ಎಡಗೈಯಲ್ಲಿ ತರ್ಜನಿಯಿಂದ ಆರಂಭಿಸಿ ಕಿರಿಬೆಟ್ಟಿಗೆ ಬರುವುದು ಸ್ಥಿತಿ ಕ್ರಮ – ಗೃಹಸ್ಥರಿಗೆ. ಮಂತ್ರಗಳು ಮಾತ್ರ ಅದೇ ಕ್ರಮದಲ್ಲೇ ಹೇಳಬೇಕು. ಎಡಗೈ ತರ್ಜನಿಯಿಂದ ಆರಂಭಿಸಿ ಬಲಗೈ ತರ್ಜನಿಯಲ್ಲಿ ಮುಗಿಸುವುದು ಯತಿಗಳ ಲಯಕ್ರಮ.

ನಾದಾದಿಗಳು ಅಗೋಚರವಾದ್ದರಿಂದ ಪ್ರಣವ ಮಂತ್ರಕ್ಕೆ ಅಂಗುಲಿನ್ಯಾಸವೇ ಇಲ್ಲವೆನ್ನುವುದೇ ಅನೇಕರ ಅಭಿಪ್ರಾಯ.

**43. ಋಷ್ಯಾದಿ ನ್ಯಾಸ**—ಯಾವ ಮಂತ್ರವನ್ನೇ ಆಗಲಿ ಋಷಿ-ಛಂದಸ್ಸು ದೇವತಾದಿ ವಿಚಾರಗಳ ಅರಿವಿಲ್ಲದೇ ಮಾಡಿದರೆ ಅಂಥವನು ಕಂಬದಂತೆ ಜಡವಾಗುತ್ತಾನೆ. ಪಾಪಿಯಾಗುತ್ತಾನೆ ಮತ್ತು ಆಯುಸ್ಸು ಕ್ಷೀಣವಾಗುತ್ತದೆ ಎಂದು ಅನೇಕ ದೋಷಗಳನ್ನು 'ಯೋ ಹ ವಾ ಅವಿದಿತಾರ್ಷ-' ಎಂಬ ಛಾಂದೋಗ್ಯ ಶ್ರುತಿ ಹೇಳುತ್ತದೆ. ಆದ್ದರಿಂದ ಪ್ರಣವ ಮಂತ್ರದ ಋಷ್ಯಾದಿಗಳ ಜ್ಞಾನವೂ ಅತ್ಯವಶ್ಯಕ. ಪ್ರಣವ ಮಂತ್ರದ ಋಷ್ಯಾದಿಗಳನ್ನು ತಂತ್ರಸಾರದ (೧ ಅಧ್ಯಾಯ ೧೭ ಶ್ಲೋಕ) ಈ ಶ್ಲೋಕ ಹೇಳುತ್ತದೆ—

ಋಷಿಶ್ಚ ದೇವತ್ಯೈಕೋಽಹಂ ತಾರಾದೀನಾಂ ವಿಶೇಷತಃ।
ಛಂದೋ ಮದೀಯಾ ಗಾಯತ್ರೀ ತಾರಾಷ್ಟಾರಯೋರ್ಮತಾ॥

(ಅರ್ಥ) ಪ್ರಣವಾದಿ ಪ್ರಾಯಶಃ ಎಲ್ಲ ಅಷ್ಟ ಮಹಾಮಂತ್ರಗಳಿಗೂ ನಾನೇ (ಎಂದರೆ ವಿಷ್ಣುವೇ) ಋಷಿ. ಋಗ್ಭಾಷ್ಯದಲ್ಲಿ ವಿಷ್ಣುಮಂತ್ರಗಳಿಗೆ ಮಾತ್ರವಲ್ಲದೆ ಲೋಕದಲ್ಲಿರುವ ಸಕಲ ವಿದ್ಯೆಗಳಿಗೂ ಶ್ರೀಹಯಗ್ರೀವ ದೇವರೇ ಮುಖ್ಯ ಋಷಿ ಎಂದು ಹೇಳಿರುವುದರಿಂದ ಪ್ರಣವಾದಿ ಮಹಾಮಂತ್ರಗಳಿಗೆ 'ವಿಶೇಷತಃ' ವಿಷ್ಣುವೇ ಋಷಿ ಎಂದು ಹೇಳಿದ್ದಾರೆ. ಇದೇ ರೀತಿ ಆ ವಿಷ್ಣು ಸಕಲಶಬ್ದವಾಚ್ಯನಾದ್ದರಿಂದ ಪ್ರಣವಾದಿ ಮಹಾಮಂತ್ರಗಳಿಗೂ ಅವನು ವಿಶೇಷತಃ ದೇವತೆ ಎಂದು ಹೇಳಿದರು. ಪ್ರಣವಮಂತ್ರಕ್ಕೂ ನಾರಾಯಣಾಷ್ಟಾಕ್ಷರ ಮಂತ್ರಕ್ಕೂ ದೇವೀ ಗಾಯತ್ರೀ ಎಂಬುದೇ ಛಂದಸ್ಸು. ಗಾಯತ್ರೀ ಛಂದಸ್ಸು ಎಂದು ಹೇಳದೆ 'ಮದೀಯಾ ಗಾಯತ್ರೀ' ಎಂದೂ 'ದೇವೀ ಗಾಯತ್ರೀ' ಎಂದೂ ಏಕೆ ಹೇಳಿದರು? ಎಂದರೆ ಸಾಮಾನ್ಯವಾಗಿ ಗಾಯತ್ರೀ ಛಂದಸ್ಸಿಗೆ ರಮಾದೇವಿಯೂ ಸರಸ್ವತಿಯೂ ಇಬ್ಬರೂ ಅಭಿಮಾನಿಗಳಾಗಿರುತ್ತಾರೆ. ಆದರೆ ಪ್ರಣವಮಂತ್ರಕ್ಕೂ ನಾರಾಯಣಾಷ್ಟಾಕ್ಷರ ಮಂತ್ರಕ್ಕೂ ಇರುವ ಗಾಯತ್ರೀ ಛಂದಸ್ಸಿಗೆ ಕೇವಲ ಲಕ್ಷ್ಮೀದೇವಿಯೊಬ್ಬಳೇ ಅಭಿಮಾನಿ ಎಂದು ತೋರಿಸುವುದಕ್ಕಾಗಿ 'ದೇವೀ ಗಾಯತ್ರೀ ಛಂದಃ'ಎಂದು ಹೇಳಿದೆ.

ಇದರಿಂದ ಪ್ರಣವ ಮಂತ್ರದ ಋಷ್ಯಾದಿನ್ಯಾಸ ಕ್ರಮವು ಹೀಗಿದೆ—

ಅಸ್ಯ ಶ್ರೀಪ್ರಣವ ಮಹಾಮಂತ್ರಸ್ಯ ಅಂತರ್ಯಾಮೀ ಋಷಿಃ (ಶಿರಸಿ)॥ ದೇವೀ ಗಾಯತ್ರೀ ಛಂದಃ (ಮುಖೇ)। ಮ. ಭಾ. ಮು. ಶ್ರೀಪರಮಾತ್ಮಾ ದೇವತಾ (ಹೃದಯೇ) । ಪ್ರಾರಂಭಿಸುವಾಗ—ಯಥಾ ಶಕ್ತಿ ಜಪೇ ವಿನಿಯೋಗಃ॥ ಮುಗಿಸುವಾಗ-ಯಥಾಶಕ್ತಿ ಜಪೋಪಸಂಹಾರೇ ವಿನಿಯೋಗಃ॥

ಋಷ್ಯಾದಿ ನ್ಯಾಸ ಮಾಡಿದ ನಂತರ ಧ್ಯಾನಶ್ಲೋಕಗಳನ್ನು ಹೇಳಿಕೊಂಡು ಜಪಾರಂಭ ಮಾಡಬೇಕು.

**44. ಪ್ರಣವ ಮಂತ್ರದ ಧ್ಯಾನಶ್ಲೋಕಗಳು**— ಈ ಶ್ಲೋಕಗಳನ್ನು ತಂತ್ರಸಾರದ ಪ್ರಥಮಾಧ್ಯಾಯದಲ್ಲಿ (ಶ್ಲೋ ೧೮ –೨೧) ಹೇಳಿದೆ—

ಉದ್ಯದ್ ಭಾಸ್ವತ್‌ಸಮಾಭಾಸಶ್ ಚಿದಾನಂದೈಕದೇಹವಾನ್।
ಚಕ್ರಶಂಖ–ಗದಾಪದ್ಮ–ಧರೋ ಧ್ಯೇಯೋऽಹಮೀಶ್ವರಃ॥
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ।
ಬ್ರಹ್ಮವಾಯು ಶಿವಾಹೀಶ–ವಿಪೈಃ ಶಕ್ರಾದಿಕೈರಪಿ॥
ಸೇವ್ಯಮಾನೋऽಧಿಕಂ ಭಕ್ತ್ಯಾ ನಿತ್ಯನಿಶ್ಶೇಷ ಶಕ್ತಿಮಾನ್ ॥
ಮೂರ್ತಯೋऽಷ್ಟಾವಪಿ ಧ್ಯೇಯಾಸ್ ಚಕ್ರ–ಶಂಖ–ವರಾಭಯೈಃ ।
ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣ ಭೂಷಿತಾಃ ॥

ಕಠಿನ ಶಬ್ದಾರ್ಥ — ಉದ್ಯದ್–ಭಾಸ್ವತ್ — ಉದಯಿಸುತ್ತಿರುವ ಸೂರ್ಯನಂತೆ, ಆಭಾಸಃ — ಪ್ರಕಾಶವುಳ್ಳವನು, ಚಿತ್ — ಜ್ಞಾನ, ಏಕ — ಮಾತ್ರವೇ, ಅಹಂ — ನಾನು (ನಾರಾಯಣನು), ಧರಾ — ಭೂದೇವಿ, ಆಶ್ಲಿಷ್ಟಃ — ಆಲಿಂಗಿತ, ಅಹೀಶ — ಸರ್ಪಗಳ ರಾಜ–ಶೇಷ ದೇವರು, ವಿಪೈಃ — ಗರುಡ ಮೊದಲಾದವರಿಂದ, ಶಕ್ರ — ದೇವೇಂದ್ರ.

(ಅರ್ಥ) ನಾನು (ನಾರಾಯಣನು) ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪು ಬಣ್ಣವುಳ್ಳವನಾಗಿ ಪ್ರಕಾಶಿಸುತ್ತಿದ್ದೇನೆ. ಕೇವಲ ಜ್ಞಾನಾನಂದಮಯವಾದ (ಅಪ್ರಾಕೃತವಾದ) ದೇಹವುಳ್ಳವನಾಗಿದ್ದೇನೆ. ಮೇಲುಗಡೆಯ ಬಲಗೈಯಲ್ಲಿ ಚಕ್ರವನ್ನೂ, ಎಡಗೈಯಲ್ಲಿ ಶಂಖವನ್ನೂ, ಕೆಳಗಡೆಯ ಎಡಗೈಯಲ್ಲಿ ಗದೆಯನ್ನೂ, ಕೆಳಗಿನ ಬಲಗೈಯಲ್ಲಿ ಪದ್ಮವನ್ನೂ ಧರಿಸಿದ್ದೇನೆ. ಎಡಗಡೆ ಶ್ರೀದೇವಿಯಿಂದಲೂ ಬಲಗಡೆ ಭೂದೇವಿಯಿಂದಲೂ ಆಲಿಂಗಿತನಾಗಿದ್ದೇನೆ. ವಿಶ್ವಾದಿ ಬೇರೆ ಬೇರೆ ಭಗವದ್ರೂಪಗಳ ಮಧ್ಯದಲ್ಲಿ ಶೋಭಿಸುತ್ತಿದ್ದೇನೆ. ನನ್ನನ್ನು ಬ್ರಹ್ಮ, ವಾಯು, ಶಿವ, ಶೇಷ, ಗರುಡಾದಿ ದೇವತೆಗಳೂ ಇಂದ್ರಾದಿ ದೇವತೆಗಳೂ ಭಕ್ತಿಯಿಂದ ಸೇವಿಸುತ್ತಿದ್ದಾರೆ. (ಮೂರ್ತಯಃ ಎಂಬ ಶ್ಲೋಕದ ಅರ್ಥವನ್ನು 41ನೇ ಖಂಡದಲ್ಲೇ ಹೇಳಿದೆ)

ಈ ರೀತಿ ಧ್ಯಾನ ಮಾಡಿ (ಧ್ಯಾನ ಶ್ಲೋಕ ಪಠಿಸಿ, ಜಪಾರಂಭ ಮಾಡಬೇಕು)

ಜಪಾರಂಭಕ್ಕೆ ಸಂಕಲ್ಪ — ಮ.ಭಾ.ಮು. ಶ್ರೀಪರಮಾತ್ಮ ಪ್ರೇರಣಯಾ ಮ. ಭಾ.ಮು. ಶ್ರೀಪರಮಾತ್ಮಪ್ರೀತ್ಯರ್ಥಂ ಯಥಾಶಕ್ತಿ ಪ್ರಣವಮಂತ್ರಜಪಂ ಕರಿಷ್ಯೇ.

**45. ಪ್ರಣವ ಮಂತ್ರ ಜಪ**—ಬ್ರಹ್ಮಚಾರಿಗಳಿಗೂ ಗೃಹಸ್ಥರಿಗೂ ಸಾಮಾನ್ಯವಾಗಿ ಕೇವಲ ಹತ್ತು ಪ್ರಣವಗಳನ್ನು ಜಪ ಮಾಡುವುದಕ್ಕೆ ಅಧಿಕಾರವಿದೆಯೆಂದು ಎಲ್ಲಾ ಮಂತ್ರ ಜಪ ಪುಸ್ತಕಗಳಲ್ಲೂ ಹೇಳಿದೆಯಲ್ಲದೆ ಸಂಪ್ರದಾಯವೂ ಹಾಗೆಯೇ ಬಂದಿದೆ. ಆದರೆ ತಂತ್ರಸಾರದಲ್ಲಿ ಈ ಬಗ್ಗೆ

ಸ್ಪಷ್ಟೋಕ್ತಿಯು ಕಂಡುಬರುವುದಿಲ್ಲ. ಹೀಗೆ ಸ್ಪಷ್ಟೋಕ್ತಿಯು ಇಲ್ಲದಿರುವುದನ್ನು ಕಂಡು ಕೆಲವು ವಿದ್ವಾಂಸರು ಗೃಹಸ್ಥರಿಗೂ ಬ್ರಹ್ಮಚಾರಿಗಳಿಗೂ ಪ್ರಣವ ಮಂತ್ರ ಜಪಕ್ಕೆ ಅಧಿಕಾರವೇ ಇಲ್ಲವೆಂದು ವಾದಿಸುತ್ತಾರೆ. ಆದರೆ ಅವರ ವಾದವು ಸಮೀಚೀನವಲ್ಲವೆಂಬುದಕ್ಕೆ ಛಲಾರೀ ಟೀಕಾಕಾರರು ಅನೇಕ ಯುಕ್ತಿಗಳನ್ನು ತೋರಿಸುತ್ತಾರೆ. (೧ನೇ ಯುಕ್ತಿ) ಪ್ರಣವ ಮಂತ್ರಕ್ಕೆ ಗೃಹಸ್ಥರಿಗೂ ಬ್ರಹಚಾರಿಗಳಿಗೂ ಅಧಿಕಾರವೇ ಇಲ್ಲದಿದ್ದು ಕೇವಲ ಯತಿಗಳಿಗೆ ಮಾತ್ರವೇ ಅಧಿಕಾರವಿದ್ದಿದ್ದರೆ ಶ್ರೀಮದಾಚಾರ್ಯರು ಪ್ರಣವ ಮಂತ್ರಕ್ಕೆ ಅಂಗನ್ಯಾಸವನ್ನೂ ವರ್ಣನ್ಯಾಸವನ್ನೂ ಋಷ್ಯಾದಿಗಳನ್ನೂ ಧ್ಯಾನಶ್ಲೋಕಗಳನ್ನೂ ಸ್ಪಷ್ಟವಾಗಿ ಏಕೆ ಹೇಳುತ್ತಿದ್ದರು? (೨ನೇ ಯುಕ್ತಿ) ತತ್ವನ್ಯಾಸ – ಮಾತೃಕಾನ್ಯಾಸಾದಿಗಳಿಗೂ ಮಾತೃಕಾಮಾಲಾಮಹಾಮಂತ್ರಕ್ಕೂ ಪುರುಷಸೂಕ್ತಮಂತ್ರಕ್ಕೂ ನ್ಯಾಸಾದಿಗಳನ್ನು ಹೇಳುವಾಗ ಸ್ಪಷ್ಟವಾಗಿ 'ತಾರವನ್ನಿಖಿಲಂಸ್ಮೃತಮ್' (ಅಂಗನ್ಯಾಸ, ಋಷ್ಯಾದಿ ನ್ಯಾಸ, ಧ್ಯಾನ) (ಎಲ್ಲವೂ ಪ್ರಣವ ಮಂತ್ರದಂತೆಯೇ) ಎಂದು ಹೇಳಿದ್ದಾರೆ. ಪ್ರಣವ ಜಪಕ್ಕೆ ಅಧಿಕಾರವೇ ಇಲ್ಲದಿರುವಾಗ 'ಪ್ರಣವದಂತೆಯೇ ಮಾಡಿ' ಎಂದು ಏಕೆ ಹೇಳುತ್ತಿದ್ದರು? (೩ನೇ ಯುಕ್ತಿ) ಅಷ್ಟ ಮಹಾಮಂತ್ರಗಳ ವಿಚಾರವನ್ನು ಉಪಸಂಹಾರ ಮಾಡುವಾಗ 'ಏತೇ ತು ಸರ್ವ ಮಂತ್ರಾಣಾಂ' ಎಂದೂ (೧ ಅ. ೪೭ ಶ್ಲೋ) 'ಏತಜ್ಞಾನಾತ್', 'ಏತಜ್ಜಪಾತ್' (೧ ಅ. ೪೮ ಶ್ಲೋ) ಎಂದರೆ ಈ ಎಂಟು ಮಂತ್ರಗಳ ಜ್ಞಾನದಿಂದ, ಈ ಎಂಟು ಮಂತ್ರಗಳ ಜಪದಿಂದ— ಎಂದು ಪ್ರಣವವನ್ನೇ ಸೇರಿಸಿ ಹೇಳುತ್ತಲೇ ಇರಲಿಲ್ಲ. ಜ್ಞಾನಮಾತ್ರವಲ್ಲ —'ಏತಜ್ಜಪಾತ್' ಎಂದರೆ ಈ ಎಂಟು ಮಂತ್ರಗಳ ಜಪದಿಂದಲೇ ಎಲ್ಲ ಮಂತ್ರಗಳ ಜಪ ಮಾಡಿದಂತಾಗುತ್ತದೆ ಎಂದು ಹೇಳುವುದು ಸಾಧ್ಯವೇ ಇರಲಿಲ್ಲ. (೪ನೇ ಯುಕ್ತಿ) ಅಲ್ಲದೆ ಮೂರ್ತಿ ಪ್ರತಿಷ್ಠಾ ನಿರೂಪಣ ಸಂದರ್ಭದಲ್ಲಿ 'ಪ್ರಣವಂ ಚ ಜಪೇತ್' ಆಯಾ ಮೂರ್ತಿಗಳ ಮಂತ್ರಗಳನ್ನು ಜಪಿಸಿದ ಬಳಿಕ ನಾರಾಯಣಾಕ್ಷರ ಮಂತ್ರವನ್ನೂ ಪ್ರಣವಮಂತ್ರವನ್ನೂ ಜಪಿಸಬೇಕು (೩ ಅ. ೧೧೮ ಶ್ಲೋ) ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ದೇವತಾ ಪ್ರತಿಷ್ಠೆ ಮಾಡುವ ಋತ್ವಿಕ್ಕುಗಳು (ಪುರೋಹಿತರು) ಗೃಹಸ್ಥರೇ ಆಗಿರುವರಲ್ಲದೆ ಸಂನ್ಯಾಸಿಗಳಲ್ಲ. ಆದ್ದರಿಂದ ಗೃಹಸ್ಥರಿಗೂ ಬ್ರಹ್ಮಚಾರಿಗಳಿಗೂ ಪ್ರಣವಮಂತ್ರಜಪಕ್ಕೆ ಅಧಿಕಾರವಿದೆ ಎಂದು ಸಿದ್ಧವಾಗುತ್ತದೆ. ಯತಿಗಳು ಪ್ರತಿನಿತ್ಯ ಕನಿಷ್ಠ ಪಕ್ಷ ಮೂರು ಸಾವಿರ ಪ್ರಣವಮಂತ್ರ ಜಪ ಮಾಡಬೇಕೆಂದು ಯತಿಪ್ರಣವಕಲ್ಪದಲ್ಲಿ ಹೇಳಿರುವುದು ಯತಿಗಳಿಗೆ ಮಾತ್ರ ಸಾವಿರಗಟ್ಲೆ ಮಾಡಲು ಅಧಿಕಾರವಿದೆಯೇ ಹೊರತು ಬ್ರಹ್ಮಚಾರಿಗಳಿಗೂ ಗೃಹಸ್ಥರಿಗೂ ಇಲ್ಲ. (೫ನೇ ಯುಕ್ತಿ) ಒಂದು ತಂತ್ರಸಾರದ ವ್ಯಾಖ್ಯಾದಲ್ಲಿ ಹೀಗೆ ಹೇಳಿದೆಯಂತೆ (ಎಂದು ಒಬ್ಬ ಅನುಭವಿ ವಿದ್ವಾಂಸರು ನನಗೆ ಹೇಳಿದ್ದರು) — ಗೃಹಸ್ಥರಿಗಾಗಲಿ, ಬ್ರಹ್ಮಚಾರಿಗಳಿಗಾಗಲಿ, ಶೂದ್ರಾದಿಗಳ ಸಂಪರ್ಕ ವಿಲ್ಲದೆ ಪರಿಶುದ್ಧನಾಗಿದ್ದ ಪಕ್ಷದಲ್ಲಿ ನೂರೆಂಟು ಪ್ರಣವಮಂತ್ರಗಳನ್ನು ಜಪಿಸುವುದಕ್ಕೆ ಅಧಿಕಾರ ಬರುತ್ತದೆ. ನೂರೆಂಟು ಮಂತ್ರ ಜಪಕ್ಕೇ ಅಧಿಕಾರ

ಪ್ರಾಪ್ತವಾಗುತ್ತದೆಯೆಂದಾಗ ಹತ್ತು ಜಪಕ್ಕೆ ಅಧಿಕಾರವುಂಟೆಂಬುದು ಸ್ವಯಂಸಿದ್ಧವಾಗುತ್ತದೆ.

ಇಷ್ಟೆಲ್ಲ ಹೇಳಿದ್ದರಿಂದ ಗೃಹಸ್ಥರಿಗೂ ಬ್ರಹ್ಮಚಾರಿಗಳಿಗೂ ಹತ್ತು ಪ್ರಣವ ಮಂತ್ರ ಜಪಿಸುವುದಕ್ಕೆ ಅಧಿಕಾರವುಂಟೆಂದು ಸಿದ್ಧವಾಯಿತು. ಛಲಾರೀ ವ್ಯಾಖ್ಯಾದಲ್ಲೂ ಇತರ ಮಂತ್ರ ಪುಸ್ತಕಗಳಲ್ಲೂ ಎಂಟೂ ಮಹಾಮಂತ್ರಗಳನ್ನೂ ಪ್ರತಿನಿತ್ಯ ತ್ರಿಕಾಲದಲ್ಲೂ ಮಾಡಬೇಕೆಂದು ಪ್ರಮಾಣ ಹೇಳಿದ್ದಾರೆ. ಆದರೆ ಆ ರೀತಿ ತ್ರಿಕಾಲದಲ್ಲೂ ಮಾಡುವುದು ಕೋಟಿಗೆ ಒಬ್ಬರು ಸಿಗುವುದೂ ದುರ್ಲಭವೆಂದು ಧಾರಾಳವಾಗಿ ಹೇಳಬಹುದು.

ಪ್ರಣವ ಮಂತ್ರ ಜಪಮಾಡುವಾಗಲೂ, ಪ್ರಾಣಾಯಾಮ ಮಾಡುವಾಗಲೂ ಕೇವಲ 'ಓಂ' ಎಂದು ಹೇಳಿಕೊಂಡರೆ ಸಾಲದು, "ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ" ಎಂಬ ಶ್ರುತಿಯು ಹೇಳುವಂತೆ (ಈ ಶ್ರುತಿಯು ಮನುಸ್ಮೃತಿಯಲ್ಲೂ ಉದಾಹೃತವಾಗಿದೆ) ಮಂತ್ರಕ್ಕೆ ಮೊದಲು ಓಂಕಾರ ಸೇರಿಸದಿದ್ದರೆ ಆ ಮಂತ್ರವು ಸೋರಿಹೋಗುತ್ತದೆ, ಮುಂದೆ (ಕೊನೆಯಲ್ಲಿ) ಓಂ ಕಾರ ಸೇರಿಸದಿದ್ದರೆ ಆವಿಯಂತೆ ಹಾರಿ ಹೋಗುತ್ತದೆ. ಆದ್ದರಿಂದ ಎಲ್ಲ ಮಂತ್ರಗಳಿಗೂ (ಆದರಿಂದ ಪ್ರಣವಕ್ಕೂ ಸಹ) ಹಿಂದೊಂದು ಓಂಕಾರವನ್ನೂ ಮುಂದೊಂದು ಓಂಕಾರವನ್ನೂ ಸೇರಿಸಿಯೇ ಹೇಳಬೇಕು. ಆದ್ದರಿಂದ ಪ್ರಣವಮಂತ್ರ ಜಪಿಸುವಾಗ (ಮತ್ತು ಪ್ರಾಣಾಯಾಮ ಮಾಡುವಾಗಲೂ ಸಹ)ಓಂ ಓಂ ಓಂ — ಎಂದೇ ಹೇಳಿಕೊಳ್ಳಬೇಕು. ಇದರಲ್ಲಿ ಮಧ್ಯದ ಓಂಕಾರವೇ ಮುಖ್ಯವಾದ ಪ್ರಣವಮಂತ್ರ, ಎರಡೂ ಪಕ್ಕದಲ್ಲಿರುವ ಓಂಕಾರಗಳು ಆ ಪ್ರಣವ ಮಂತ್ರಕ್ಕೆ ಅಂಗರಕ್ಷಕರಿದ್ದ ಹಾಗೆ ಎಂದು ತಿಳಿಯಬೇಕು.

ಹತ್ತು ಪ್ರಣವ ಮಂತ್ರ ಜಪಿಸಬೇಕಾಗಿರುವುದರಿಂದ ಜಪಮಾಲೆಗಿಂತ ಬಲಗೈಯನ್ನು ಉಪಯೋಗಿಸುವುದೇ ಮೇಲು. ಅಂಗೈಯನ್ನು ಚಾಚಿ ಹೆಬ್ಬೆಟ್ಟಿನಿಂದ ಅನಾಮಿಕಾ ಬೆಟ್ಟಿನ ಮಧ್ಯದ ರೇಖೆಯಿಂದ ಆರಂಭಿಸಿ ಅದರ ಕೆಳಗಿನ ರೇಖೆಯನ್ನೂ ಅನಂತರ ಕಿರಿಬೆರಳಿನ ರೇಖೆಗಳನ್ನೂ ಮುಟ್ಟುತ್ತಾ ಪ್ರದಕ್ಷಿಣಾಕಾರವಾಗಿ ಹೋಗಿ ತರ್ಜನೀಬೆಟ್ಟಿನ ಕೆಳರೇಖೆಯವರೆಗೆ ಹೋದರೆ ಸರಿಯಾಗಿ ಹತ್ತು ಜಪ ಆಗುತ್ತದೆ. ಅಲ್ಲಿಂದ ಹಿಂದಕ್ಕೆ ಎರಡು ರೇಖೆಗಳು ಹೋದರೆ ಹನ್ನೆರಡಾಗುತ್ತದೆ. ಅಲ್ಲಿಗೇ ಜಪ ಮುಗಿಸಬೇಕು. ನಡುಬೆಟ್ಟಿನ ಕೆಳಗಿನ ಎರಡು ರೇಖೆಗಳು ಮೇರುಪರ್ವತ ಇದ್ದ ಹಾಗೆ. —ಆದ್ದರಿಂದ ಅವನ್ನು ದಾಟುವುದಕ್ಕೆ ಬರುವುದಿಲ್ಲವೆಂದೂ ತಿಳಿಯಬೇಕು.

(ಕ) <u>ಪ್ರಣವ ಮಂತ್ರ ಜಪೋಪಸಂಹಾರ ಕ್ರಮ</u> — ಹತ್ತು ಅಥವಾ ಹನ್ನೆರಡು ಪ್ರಣವ ಮಂತ್ರಗಳನ್ನು ಜಪಿಸಿದ ನಂತರ ಪುನಃ ಹಿಂದಿನಂತೆಯೇ ಪ್ರಾಣಾಯಾಮ, ಕರನ್ಯಾಸ—ಅಂಗನ್ಯಾಸ, ವರ್ಣನ್ಯಾಸ ಋಷ್ಯಾದಿನ್ಯಾಸ ಎಲ್ಲವನ್ನೂ ಮಾಡಿ ಧ್ಯಾನ

ಶ್ಲೋಕಗಳನ್ನೂ ಪಠಿಸಿದ ನಂತರ 'ಇತಿ ಪ್ರಣವಮಂತ್ರಃ ಜಪಃ ಸಮಾಪ್ತಃ । ಶ್ರೀ ಕೃಷ್ಣಾರ್ಪಣಮಸ್ತು' ಎಂದು ಹೇಳಿ ಕೈಗೆ ಒಂದು ಉದ್ಧರಣೆ ನೀರು ಹಾಕಿಕೊಂಡು ಅರ್ಘ್ಯದ ಬಟ್ಟಲಿಗೆ ಬಿಡಬೇಕು. ಅನಂತರ 'ಅನೇನ ಪ್ರಣವ ಮಹಾ ಮಂತ್ರ ಜಪೇನ ಭಗವಾನ್ ಮ. ಭಾ. ಮು. ಶ್ರೀ ಪರಮಾತ್ಮಾ ಪ್ರೀಯತಾಮ್ । ಸುಪ್ರೀತೋ ವರದೋ ಭವತು। ಶ್ರೀಕೃಷ್ಣಾರ್ಪಣ ಮಸ್ತು' ಎಂದು ಹೇಳಿ ಕೈ ಮುಗಿಯಬೇಕು.

(ಖ) ಜಪಾಂಗ ಅರ್ಘ್ಯಪ್ರದಾನ — ಆಮೇಲೆ ಒಂದು ಉದ್ಧರಣೆಯಲ್ಲಿ ನೀರು ಹಿಡಿದುಕೊಂಡು, ಆ ನೀರನ್ನು ಮೂರಾವರ್ತಿ ಪ್ರಣವದಿಂದಲೇ ಅಭಿಮಂತ್ರಿಸಿ, 'ಓಂ ಓಂ ಓಂ' ಮ.ಭಾ.ಮು. ಶ್ರೀಪರಮಾತ್ಮಾನಂ ತರ್ಪಯಾಮಿ' ಎಂದು ಹೇಳಿ ಉದ್ಧರಣೆಯ ನೀರನ್ನು ಕೈಗೆ ಬಗ್ಗಿಸಿಕೊಂಡು ಅರ್ಘ್ಯ ಕೊಡಬೇಕು. ಇಲ್ಲಿಗೆ ಪ್ರಣವ ಮಂತ್ರ ಜಪಾನುಷ್ಠಾನ ಮುಗಿಯುತ್ತದೆ.

ಮೇಲೆ ಅನೇಕ ಕಡೆ ಪರಮಾತ್ಮನ ಹೆಸರು ಹೇಳುವಾಗ ಮನುನಾಮಕ–ಭಾರತೀರಮಣ–ಮುಖ್ಯಪ್ರಾಣಾಂತರ್ಗತ ಎಂಬ ವಿಶೇಷಣ ಸೇರಿಸುತ್ತಾ ಬಂದಿದ್ದೇವೆ. ಏಕೆ ಸೇರಿಸಬೇಕು? ಸೇರಿಸದಿದ್ದರೆ ಏನಾಗುತ್ತದೆ!? ಎಂಬ ಒಂದು ವಿಚಾರ ಹೇಳಿ ಪ್ರಣವ ಮಹಾಮಂತ್ರದ ಪೀಠಿಕೆಯನ್ನು ಮುಗಿಸುತ್ತೇವೆ.

46. ಮುಖ್ಯಪ್ರಾಣಾಂತರ್ಗತ ಎಂಬುದರ ಬಗ್ಗೆ — ಭಗವಂತ ಯದ್ಯಪಿ ಸರ್ವತ್ರ ವ್ಯಾಪ್ತನಾಗಿದ್ದರೂ ಅವ್ಯಕ್ತನೂ ಆಗಿರುವುದರಿಂದ ಯಾರಿಗೂ ಗೋಚರನಾಗುವುದಿಲ್ಲ. ಅವನನ್ನು ಶಾಸ್ತ್ರದಿಂದಲೇ ತಿಳಿಯಬೇಕು. ಆ ಭಗವಂತ ಎಲ್ಲ ಪ್ರಾಣಿಗಳಲ್ಲೂ ಇದ್ದಾನಾದರೂ 'ಬ್ರಾಹ್ಮಣೇ ಗವಿಹಸ್ತಿನಿ।ಶುನಿ ಚೈವ ಶ್ವಪಾಕೇ ಚ' (ಗೀತೆ ೫, ೧೮) ಬ್ರಾಹ್ಮಣನಲ್ಲೂ ಹಸುವಿನಲ್ಲೂ ಆನೆಯಲ್ಲೂ ನಾಯಿಯಲ್ಲೂ ಚಂಡಾಲನಲ್ಲೂ ಇದ್ದರೂ ಕೂಡ ಅಲ್ಲೆಲ್ಲಾ ಅವನನ್ನು ಒಂದೇ ರೀತಿ ಪೂಜಿಸುವಂತಿಲ್ಲ. ಹಾಗೆಯೇ ಆ ಸ್ವಾಮಿ ರುದ್ರಾದಿ ಸಕಲ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದರೂ ಅವರಲ್ಲಿರುವ ವಿಷ್ಣುವನ್ನು ನಾವು ಪೂಜಿಸುವಂತಿಲ್ಲ. ಏಕೆಂದರೆ ರುದ್ರಾದಿ ಸಕಲ ದೇವತೆಗಳಿಗೂ ಅಜ್ಞಾನಾದಿ ದೋಷಗಳೂ ದೈತ್ಯಬಾಧೆಯೂ ಇರುವುದರಿಂದ ಅವರ ದೋಷದಿಂದ ಆ ಪರಮಾತ್ಮ ಪೂಜ್ಯನಾಗುವುದಿಲ್ಲ. 'ಕಸ್ಮಿನ್ನಹಂ' ಎಂಬ ಷಟ್ಪ್ರಶ್ನಶ್ರುತಿಯು (೬।೩) ಮುಖ್ಯ ಪ್ರಾಣ ಎಲ್ಲಿರುತ್ತಾನೋ ಅಲ್ಲೇ ಹರಿ ಇರುವನು, ಅವನಿಲ್ಲದ ಕಡೆ ತಾನಿರುವುದಿಲ್ಲವೆಂದೂ ಮುಖ್ಯಪ್ರಾಣನಿಂದ ಬಂದದ್ದನ್ನು ಮಾತ್ರ ಸ್ವೀಕರಿಸುತ್ತಾನೆ, ಮಿಕ್ಕದ್ದನ್ನು ಸ್ವೀಕರಿಸುವುದಿಲ್ಲ ಎಂದೂ ಹೇಳುತ್ತದೆ. ಅದಲ್ಲದೆ ಛಾಂದೋಗ್ಯೋಪನಿಷತ್ತಿನಲ್ಲೂ ಭಾಗವತತಾತ್ಪರ್ಯದಲ್ಲೂ ಮುಖ್ಯಪ್ರಾಣನಿಗೆ ಅಜ್ಞಾನಾದಿ ದೋಷಗಳಾಗಲಿ, ದೈತ್ಯಬಾಧೆಯಾಗಲಿ ಇಲ್ಲವೆಂದೂ ಅದ್ದರಿಂದಲೇ ಅವನು 'ಆಖಣಾಶ್ಮಸಮಃ' –ಬಂಡೆಗಲ್ಲಿದ್ದ ಹಾಗೆ ಎಂದು ಹೇಳಿದೆ. ಆದಕಾರಣ

ಮುಖ್ಯಪ್ರಾಣದೇವರ ಹೃದಯವು ಸದಾ ಸ್ವಚ್ಛವಾಗಿರುವುದರಿಂದ ಅಲ್ಲಿ ನೆಲೆಸಿರುವ ಶ್ರೀಹರಿಯೂ ಸ್ವಚ್ಛವಾಗಿ ಪರಿಶುದ್ಧನಾಗಿರುತ್ತಾನೆ. ಆದ್ದರಿಂದಲೇ ಟೀಕಾರಾಯರು ನಾರಾಯಣನಿಗೆ ನಮಸ್ಕಾರ ಮಾಡುವಾಗ 'ಶ್ರೀಮದಾನಂದ ತೀರ್ಥಾರ್ಯ—ಹೃದಯಾಮಲಮಂದಿರಃ' ಎಂದರೆ ಶ್ರೀಮನ್ಮಧ್ವಾಚಾರ್ಯರ ಹೃದಯವೆಂಬ ನಿರ್ಮಲವಾದ ಮನೆಯಲ್ಲಿ ವಾಸಮಾಡುವ— ಎಂದು ಹೇಳಿ ವಂದಿಸುತ್ತಾರೆ.

ಅಲ್ಲದೆ ಪುರಂದರದಾಸರು ಹೇಳುವಂತೆ 'ಹನುಮನ ಮತವೇ ಹರಿಯಮತ'. ಪ್ರಾಣದೇವರ ಮುಖಾಂತರ ಹೋದರೆ ಮಾತ್ರವೇ ಶ್ರೀಹರಿ ದೊರಕುತ್ತಾನೆ, ಇಲ್ಲದಿದ್ದರೆ ದೊರಕವುದಿಲ್ಲವೆಂದು ಅನೇಕ ನಿದರ್ಶನ ಕೊಟ್ಟು ತೋರಿಸಿದ್ದಾರೆ. ಆದಕಾರಣ ನಾವು ಹೇಳಿಕೊಳ್ಳುವ ಮಂತ್ರಗಳಲ್ಲಿ ಎಲ್ಲಿ ಹರಿ—ವಿಷ್ಣು —ನಾರಾಯಣ ಎಂದು ಬರುತ್ತದೋ ಅಲ್ಲೆಲ್ಲಾ 'ಮುಖ್ಯಪ್ರಾಣಾಂತರ್ಗತ' ಎಂದು ಸೇರಿಸಲೇ ಬೇಕು. ಇಲ್ಲದಿದ್ದರೆ ಅದನ್ನು ಶ್ರೀಹರಿಯೇ ಸ್ವೀಕರಿಸುವುದಿಲ್ಲ — ಅವನ ಪ್ರತಿಜ್ಞೆಯೇ ಹಾಗಿದೆ.

ಛಾಂದೋಗ್ಯಭಾಷ್ಯದಲ್ಲೂ, ಗೀತಾತಾತ್ಪರ್ಯ —ಭಾಗವತ ತಾತ್ಪರ್ಯಗಳಲ್ಲೂ ಬ್ರಹ್ಮರುದ್ರೇಂದ್ರಾದಿ ದೇವತೆಗಳಿರುವಂತೆ ಬ್ರಹ್ಮರುದ್ರಾದಿ ಅದೇ ಹೆಸರಿನ ದೈತ್ಯರುಗಳೂ ಇದ್ದಾರೆಂದೂ ಅವರಿಗೆ ಎಂದರೆ ದೈತ್ಯರಿಗೆ 'ದೀನತೆಯಿಂದ ದೇವ ' ಎಂಬ ಹೆಸರೆಂದೂ (ದೀನತ್ವಾತ್ ದೇವನಾಮಕಾಃ) ಹೇಳಿದೆ. ಆದ್ದರಿಂದ ಮುಖ್ಯಪ್ರಾಣಾಂತರ್ಗತ ಶ್ರೀಹರಿ ಎಂದು ಹೇಳದೆ ಶ್ರೀಹರಿ ಎಂದು ಹೇಳಿದರೆ ಅದನ್ನು ಕಂಗಾಳಿಗಳಾದ (ದೀನತ್ವಾತ್) ಆ ದೈತ್ಯರು ತೆಗೆದುಕೊಂಡು ಹೋಗಿಬಿಡುತ್ತಾರೆ. ಮುಖ್ಯಪ್ರಾಣ ಎಂದರೂ ಕೂಡ ಆ ಹೆಸರಿನ ಒಬ್ಬ ದೈತ್ಯ ಬಂದು ಬಿಡುವನು; ಅದನ್ನೂ ತಡೆಯುವದಕ್ಕಾಗಿ ನಾವು ಮುಖ್ಯ ಪ್ರಾಣನಿಗೂ ಬೇರೆ ವಿಶೇಷಣ ಕೊಡಬೇಕು. ಗೀತಾತಾತ್ಪರ್ಯದಲ್ಲೂ ಛಾಂದೋಗ್ಯಭಾಷ್ಯದಲ್ಲೂ ಹೇಳಿದಂತೆ 'ಮನುನಾಮಕ' ಎಂದು ಹೇಳಿದರೆ 'ಜ್ಞಾನಿಗಳಾದ' ಎಂದು ಅರ್ಥವಾಗುವುದರಿಂದ ಅದು ನೇರವಾಗಿ ಪ್ರಾಣದೇವರಿಗೇ ಹೋಗುವುದೆಂದು ಛಾಂದೋಗ್ಯಭಾಷ್ಯದಲ್ಲೂ ಗೀತಾತಾತ್ಪರ್ಯದಲ್ಲೂ ಹೇಳಿದ ಪ್ರಮಾಣಗಳು ತಿಳಿಸುತ್ತವೆ. ಅಥವಾ 'ಭಾರತೀರಮಣ' ಎಂಬ ವಿಶೇಷಣ ಕೊಟ್ಟರೂ ನೇರವಾಗಿ ಪ್ರಾಣದೇವರಿಗೇ ಹೋಗುತ್ತದೆ. ಕ್ವಚಿತ್ ಮುಖ್ಯಪ್ರಾಣನೆಂಬ ದೈತ್ಯನಿದ್ದರೂ ಅವನ ಪತ್ನಿಯ ಹೆಸರು ಬೇರೆ ಇರುತ್ತದೆ. ಅದರಿಂದ ದೈತ್ಯರಿಗೆ 'ಭಾರತೀರಮಣ ಮುಖ್ಯಪ್ರಾಣ' ಎಂಬ ಹೆಸರು ಸರ್ವಥಾ ಸಲ್ಲಲು ಸಾಧ್ಯವಿಲ್ಲ.

ಇದರ ಜೊತೆಗೆ ಮುಖ್ಯಪ್ರಾಣನ ದ್ವಾರಾ ಹರಿಯ ಹತ್ತಿರ ಹೋಗುವುದು ಬಹಳ ಸುಲಭ. ನಮ್ಮ ರಾಯರು (ರಾಘವೇಂದ್ರಸ್ವಾಮಿಗಳು) 'ಪ್ರಾತಃ

ಸಂಕಲ್ಪಗದ್ಯ'ದಲ್ಲಿ ಹೇಳಿದಂತೆ 'ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಶೋಧಕೇನ (ಸಸ್ನೇಹಾನಾಂ ಸಹಸ್ರಾನ್ ಅಹರಹರಹಿತಂ ದೇಹಭಾಜಾಂ — ವಾಯುಸ್ತುತಿ ಶ್ಲೋ. ೧೭) ಸರ್ವಕರ್ಮಕರ್ತ್ರಾ ಸರ್ವಕರ್ಮಕಾರಯಿತ್ರಾ ಸರ್ವಕರ್ಮಸ್ವಾಮಿನಾ ಸರ್ವಕರ್ಮಸಮರ್ಪಕೇಣ ಸರ್ವಕರ್ಮಪ್ರೇರಕೇಣ ಸರ್ವಕರ್ಮ ಶುದ್ಧಿಪ್ರದೇನ ಸರ್ವಕರ್ಮಸಿದ್ಧಿಪ್ರದೇನ' ಇಂಥಾ ಪ್ರಾಣದೇವರ ಮುಖಾಂತರ ನಾವು ಹೋದರೆ ನಮ್ಮ ಅಲ್ಪಕರ್ಮವು ಪರಿಶುದ್ಧವಾಗಿ ಶ್ರೀಹರಿಗೆ ಮುಟ್ಟುತ್ತದೆ, ಮತ್ತು ಅದು ಪರಿಶುದ್ಧವಾಗಿರುವುದರಿಂದಲೇ ಸಿದ್ಧಿಯಾಗುತ್ತದೆ. ಇದನ್ನೆಲ್ಲಾ ತಿಳಿದುಕೊಂಡರೆ ನಾವು ಮುಂದೆ ಶ್ರೀಹರಿಯ ನಾಮ ಎಲ್ಲೆಲ್ಲಿ ಬರುತ್ತದೋ ಅಲ್ಲೆಲ್ಲಾ 'ಮನುನಾಮಕ' ಎಂದೂ (ಒಂದು ವೇಳೆ ಅದು ಪ್ರಸಿದ್ಧಿಯಿಲ್ಲವೆಂದು ಬಿಟ್ಟರೂ ಕೂಡ) ಭಾರತೀರಮಣಮುಖ್ಯಪ್ರಾಣಾಂತರ್ಗತ' ಎಂದು ಏಕೆ ಸೇರಿಸಿದ್ದೇವೆಂಬುದು ಅರ್ಥವಾಗುತ್ತದೆ— ಎಂದು ಹೇಳಿ ಈ ಪೀಠಿಕೆಯನ್ನು ಮುಗಿಸುತ್ತೇವೆ. ಪ್ರಣವಮಹಾಮಂತ್ರ ಆದ ನಂತರ ನಾರಾಯಣಾಷ್ಟಾಕ್ಷರ ಮಂತ್ರ ಮಾಡಿಕೊಳ್ಳಬೇಕು. ಆದ್ದರಿಂದ ಈಗ ಆ ಮಂತ್ರದ ವಿವರಣೆಗೆ ಹೋಗೋಣ.

ಪ್ರಣವಾಖ್ಯ ಮಹಾಮಂತ್ರ — ಪೀಠಿಕಾ ತು ಯಥಾಮತಿ।
ಲಿಖಿತಾ ವಿಷ್ಣುತೀರ್ಥೇನ ಪ್ರೀಯತಾಂ ಮಧ್ವವಲ್ಲಭಃ॥

# 2. ಮೂಲ ಮಂತ್ರವೆಂಬ ನಾರಾಯಣಾಷ್ಟಾಕ್ಷರ ಮಹಾಮಂತ್ರ

## ಪೀಠಿಕಾ

47. ಮಂತ್ರೋದ್ಧಾರ: — ತಂತ್ರಸಾರದ ಪ್ರಥಮಾಧ್ಯಾಯದಲ್ಲಿ ನಾರಾಯಣಾಷ್ಟಾಕ್ಷರ ಮಹಾಮಂತ್ರವು ಪ್ರಣವ ಮಹಾಮಂತ್ರದ ಎಂಟು ಅಕ್ಷರಗಳಿಂದಲೇ ನಿಷ್ಪನ್ನವಾಗಿದೆಯೆಂದು ಹೇಳಿದೆ —

ನಾರಾಯಣಾಷ್ಟಾಕ್ಷರಶ್ಚ ತಾರಾಷ್ಟಾಕ್ಷರ ಭೇದವಾನ್, (೧೧)

ಪ್ರಣವದಲ್ಲಿ ಎಂಟು ವರ್ಣಗಳಿವೆಯಷ್ಟೆ. ಅದರ ಪೈಕಿ ಅಕಾರದಿಂದ ನಾರಾಯಣಾಷ್ಟಾಕ್ಷರ ಮಂತ್ರದ ಓಂಕಾರವೂ, ಉಕಾರದಿಂದ ನಕಾರವೂ, ಮಕಾರದಿಂದ ಮೋಕಾರವೂ, ನಾದದಿಂದ ನಾಕಾರವೂ, ಬಿಂದುವಿನಿಂದ ರಾಕಾರವೂ, ಘೋಷ (ಅಥವಾ ಕಲಾ) ದಿಂದ ಯಕಾರವೂ, ಶಾಂತದಿಂದ ಣಾಕಾರವೂ ಮತ್ತು ಅತಿಶಾಂತದಿಂದ ಕಡೆಯ ಯಕಾರವೂ ಹೊರಟು

ನಾರಾಯಣಾಷ್ಟಾಕ್ಷರವಾಯಿತು. ಪ್ರಣವದ ಅಕಾರಾದಿಗಳಿಗೆ ಹೇಗೆ ವಿಶ್ವಾದಿ ಮೂರ್ತಿಗಳು ವಾಚ್ಯರೋ ಹಾಗೆಯೇ ನಾರಾಯಣಾಷ್ಟಾಕ್ಷರದ ಎಂಟು ವರ್ಣಗಳಿಗೂ ಆ ವಿಶ್ವಾದಿ ಎಂಟು ಮೂರ್ತಿಗಳೇ ವಾಚ್ಯಗಳಾಗಿವೆ. ಈ ವಿಷಯ ವರ್ಣನ್ಯಾಸ ಮಾಡಿಕೊಳ್ಳುವಾಗ ಮುಂದೆ ಸ್ಪಷ್ಟವಾಗಿ ಗೊತ್ತಾಗುತ್ತದೆ.

**48. ಐತರೇಯ ಭಾಷ್ಯದ ಹೇಳಿಕೆ:** — ಐತರೇಯ ಭಾಷ್ಯದಲ್ಲಿ (೨ ಆ. ೩ಅ. ೮ ಖಂ) ' ಅ ಇತಿ ಬ್ರಹ್ಮ ' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡುವಾಗ ಓಂಕಾರವೂ, ನಾರಾಯಣ ಎಂಬ ಪದವೂ ಅಕಾರದ ವಿವರಣೆಯೇ ಆಗಿವೆಯೆಂದು ಹೇಳಿ ಪ್ರತಿಪಾದನೆ ಮಾಡಿ ತೋರಿಸಿದ್ದಾರೆ —

ಅನ್ಯೇऽಪಿ ಶಬ್ದಾಃ ಸರ್ವೇऽಪಿ ಹ್ಯಕಾರಾರ್ಥಾಭಿಧಾಯಿನಃ ।
ತಸ್ಮಾದಕಾರ ಏವಾಯಂ ಸರ್ವವಾಗಾತ್ಮಕಃ ಶ್ರುತಃ ॥
ಸರ್ವದೋಷವಿರುದ್ಧೋऽರು — ಗುಣಪೂರ್ಣಸ್ವಭಾವತಃ ।
ನಾರಾಯಣ ಇತಿ ಪ್ರೋಕ್ತೋऽ ಹ್ಯಕಾರಾರ್ಥೋऽಯಮೇವ ಹಿ ॥
ತಸ್ಮಾದಕಾರ ಬೀಜೇಯಂ ವಿಷ್ಣೋರ್ನಾರಾಯಣಾಭಿಧಾ ।
ಪ್ರಣವಶ್ಚ ತತೋऽಕಾರಃ ಪ್ರಧಾನಂ ನಾಮ ಚಕ್ರಿಣಃ ।
ಅಕಾರನಾಮಾ ನಾನ್ಯೋऽಸ್ತಿ ತಮೃತೇ ಪುರುಷೋತ್ತಮಮ್ ॥

(ಸಾಮಾನ್ಯಾರ್ಥ) ಮಿಕ್ಕ ಎಲ್ಲ ಶಬ್ದಗಳೂ ಹೀಗೆಯೇ ಅಕಾರದ ಅರ್ಥವನ್ನೇ ಹೇಳುತ್ತವೆ. ಆದ್ದರಿಂದ ಅಕಾರವೇ ಸರ್ವವಾಕ್‌ಸ್ವರೂಪವಾಗಿದೆ...(ಈ ಪ್ರಕಾರ ಸಕಲ ದೋಷಗಳಿಗೂ ಅತ್ಯಂತ ವಿರುದ್ಧವಾದ ಗುಣಪೂರ್ಣ ಸ್ವಭಾವವುಳ್ಳವನಾದ್ದರಿಂದ ಈ ನಾರಾಯಣನೂ (ನಾರಾಯಣ ಎಂಬ ಹೆಸರೂ) ಅಕಾರದ ಅರ್ಥವೇ ಆಗಿದೆ. ಆದ್ದರಿಂದ ವಿಷ್ಣುವಿನ ನಾರಾಯಣ ಎಂಬ ಹೆಸರೂ (ಅಭಿಧಾ) ಓಂಕಾರವೂ ಎಲ್ಲವೂ ಅಕಾರವೆಂಬ ಬೀಜದಿಂದ ಹುಟ್ಟಿದ ಹೆಸರುಗಳಾಗಿವೆ. ಅಥವಾ ವಿಷ್ಣುವಿನ ಸಕಲ ಹೆಸರುಗಳಿಗೂ ಅಕಾರವು ಬೀಜಭೂತವಾಗಿದೆ. ಈ ಪ್ರಕಾರ ಅಕಾರವೇ ನಾರಾಯಣನ ಮುಖ್ಯ ಹೆಸರು. ಆ ಭಗವಂತ ವಿಷ್ಣುವನ್ನು ಬಿಟ್ಟರೆ ಬೇರೆ ಯಾರೂ ಅಕಾರ ಎಂಬ ಹೆಸರುಳ್ಳವರಾಗಿಲ್ಲ. (ನಾರಾಯಣ ತಂತ್ರಿಗಳ ಐತರೇಯ ಭಾಷ್ಯದ ಪುಟ ೫೧೫-೧೬ ನೋಡಿ ಮತ್ತು ಮಾಧ್ವಮಹಾಮಂಡಲದ ಪ್ರಕಾಶನದ 'ಉಪನಿಷತ್ ಪ್ರಸ್ಥಾನ' ಮೊದಲನೇ ಭಾಗದ ಪುಟ 612-15 ನೋಡಿ)

**49. ನಾರಾಯಣ ಶಬ್ದಾರ್ಥ** — ನಾರಾಯಣ ಶಬ್ದಾರ್ಥವನ್ನು ತತ್ತ್ವಪ್ರಕಾಶಿಕಾದಲ್ಲೂ ಶ್ರೀಮನ್ನ್ಯಾಯಸುಧಾದಲ್ಲೂ ತೋರಿಸಿಕೊಟ್ಟಿದ್ದಾರೆ. ಅರ ಎಂದರೆ ದೋಷ ಎಂದರ್ಥ. ತದ್ವಿರುದ್ಧವಾದುದು ನಾರ, (ಸಾಮಾನ್ಯವಾಗಿ ಸ್ವರಾಂತ ಶಬ್ದಗಳ ವಿರುದ್ಧ ವಾಚಕಗಳು ಅನ ಎಂದಾಗುತ್ತವೆ — ಅನೇಕ, ಅನಿಷ್ಟ,

ಅನಾರೋಗ್ಯ ಇತ್ಯಾದಿ. ಆದರೆ ನಾರ ಎಂಬುದು ನಗ ನಾಕ ಮೊದಲಾದ ಶಬ್ದಗಳಂತೆ ಅದಕ್ಕೆ ವಿರುದ್ಧವಾಗಿದೆ). ಆದ್ದರಿಂದ ನಾರ ಎಂದರೆ ಗುಣ ಎಂದು ಅರ್ಥವಾಯಿತು. ನಾರಾಣಾಂ- ಗುಣಾನಾಂ-, ಅಯನಂ-ನಾರಾಯಣಃ ಎಂಬ ವ್ಯುತ್ಪತ್ತಿಯಿಂದ ನಾರ-ಗುಣಗಳಿಗೆ, ಅಯನ–ಆಶ್ರಯನಾದ್ದರಿಂದ ನಾರಾಯಣ–ಅನಂತಗುಣ ಪರಿಪೂರ್ಣನೆಂಬುದು ಮೊದಲನೆಯ ಅರ್ಥ. ಇದು ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ಅರ್ಥ. ೨: ಅರಾಯಣೋ ನ ಭವತೀತಿ ವಾ ನಾರಾಯಣಃ ಈ ಅರ್ಥದಲ್ಲಿ ನ-ಕಾರವನ್ನು ಆಮೇಲೆ ಜೋಡಿಸಬೇಕು. ಅರ-ದೋಷಗಳಿಗೆ, ಅಯನ-ಆಶ್ರಯನು, ನ-ಅಲ್ಲ ಎಂದರೆ ಸರ್ವದೋಷ ವಿವರ್ಜಿತ ಎಂಬುದು ಬ್ರಹ್ಮಸೂತ್ರದ ಎರಡನೆಯ ಅಧ್ಯಾಯದ ಅರ್ಥ. ೩. ಅರ ಎಂದರೆ ದೋಷಗಳು, ನ-ಇಲ್ಲದವುಗಳು ಆದ್ದರಿಂದ ವೇದಗಳಿಗೆ ನಾರಾಃ ಎಂದು ಹೆಸರು. ೪. ನಾರ ವೇದಗಳಿಗೆ, ಅಯನ-ಆಶ್ರಯ ಎಂದರೆ ಪ್ರತಿಪಾದ್ಯನಾದ್ದರಿಂದ ನಾರಾಯಣ ಎಂದರೆ ಸರ್ವವೇದಪ್ರತಿಪಾದ್ಯ ಎಂದರ್ಥವಾಗುತ್ತದೆ. ನರ ಎಂದರೆ ಮನುಷ್ಯರು–ಜ್ಞಾನಿಗಳು ಎಂದರ್ಥ. ನರರಿಗೆ ಸಂಬಂಧಿಸಿದ್ದಾದ್ದರಿಂದ ನಾರಂ ಎಂದರೆ ಜ್ಞಾನ ಎಂದೂ ಅರ್ಥವಾಗುತ್ತದೆ. ನಾರ-ಜ್ಞಾನಕ್ಕೆ ಅಯನಂ-ಆಶ್ರಯನಾದ್ದರಿಂದಲೂ – ಎಲ್ಲಾ ಜ್ಞಾನಕ್ಕೂ ಅವನೇ ಮುಖ್ಯ ವಿಷಯನಾದ್ದರಿಂದ–ಎಲ್ಲಾ ವಿದ್ಯೆಗಳು ಅವನನ್ನೇ ಹೇಳುವುದರಿಂದಲೂ ಅವನು ನಾರಾಯಣ–ಇದು ಬ್ರಹ್ಮಸೂತ್ರದ ಮೂರನೇ ಅಧ್ಯಾಯದ ಅರ್ಥ. ೫ ಅರ ಎಂದರೆ ದೋಷಗಳು–ಹುಟ್ಟು-ಸಾವು, ವೃದ್ಧಿ, ಹ್ರಾಸ, ರೋಗ-ರುಜಿನಾದಿ ದೋಷಗಳು; ಅವುಗಳು ಯಾವುವೂ ಮುಕ್ತರಿಗೆ ಇಲ್ಲವಾದ್ದರಿಂದ ನಾರಾಃ ಎಂದರೆ ಮುಕ್ತರು ಎಂದರ್ಥ. ಅಥವಾ ರೀಙ್ ಕ್ಷಯೇ ಎಂಬ ಧಾತುವಿನಿಂದ 'ರ'ಎಂದರೆ ಕ್ಷಯ ವೃದ್ಧಿ ಸಾವು ರೋಗಾದಿಗಳೆಂದು ಅರ್ಥ; ಅವು ಇಲ್ಲದವರಾದ್ದರಿಂದಲೂ ನಾರಾಃ ಎಂದರೆ ಮುಕ್ತರು ಎಂದೇ ಅರ್ಥ. ನಾರಾಣಾಂ–ಮುಕ್ತಾನಾಂ. ಅಯನಂ-ಆಶ್ರಯಃ ಸಕಲ ಮುಕ್ತರಿಗೆ ಆಶ್ರಯವಾದ್ದರಿಂದಲೂ ಅವನಿಗೆ ನಾರಾಯಣ ಎಂದು ಹೆಸರು. ಇದು ಬ್ರಹ್ಮಸೂತ್ರಗಳ ನಾಲ್ಕನೇ ಅಧ್ಯಾಯದ ಅರ್ಥ. ೬. ನರಾಣಾಮಧಿಪತಿರ್ನಾರೋ ಮುಖ್ಯವಾಯುಃ –ಸಕಲ ಜೀವರಿಗೂ ಉತ್ತಮನಾದ್ದರಿಂದ ವಾಯುದೇವರಿಗೆ ನಾರ ಎಂದು ಹೆಸರು. ಆ ನಾರ-ವಾಯು ದೇವರಿಗೆ ಅಯನಂ-ಆಶ್ರಯನಾದ್ದರಿಂದಲೂ ನಾರಾಯಣ. ೭. ಅರ ಎಂದರೆ ದೋಷ–ಜನನ ಮರಣಾದಿಗಳು ಆದಾವುದೂ ಇಲ್ಲವಾದ್ದರಿಂದ ನಾರಾ.ಎಂದರೆ ನಿತ್ಯಮುಕ್ತಳಾದ ಲಕ್ಷ್ಮೀದೇವಿ. ಅವಳಿಗೆ ಪತಿತ್ವೇನ, ನಿಯಾಮಕತ್ವೇನ ಅಯನಂ–ಆಶ್ರಯನಾದ್ದರಿಂದ–ಲಕ್ಷ್ಮೀಪತಿಯಾದ್ದರಿಂದಲೂ ನಾರಾಯಣ. ಹೀಗೆ ಯಥಾಶಕ್ತಿ ನಾರಾಯಣ ಶಬ್ದಾರ್ಥವನ್ನು ತಿಳಿದುಕೊಂಡು ಮಂತ್ರಜಪ ಮಾಡಬೇಕು.

**50.** ಅಂಗನ್ಯಾಸ–ನಾರಾಯಣಾಷ್ಟಾಕ್ಷರ ಮಂತ್ರಕ್ಕೆ ಅಂಗನ್ಯಾಸ ಕ್ರಮವನ್ನು ಈ ಕೆಳಗಿನ ಶ್ಲೋಕಗಳಿಂದ ಹೇಳಿದ್ದಾರೆ –(೧೮. ೩೧-೩೩ ಶ್ಲೋ.) –

**ಅಂಗಾನಿ...ಪ್ರೋಚ್ಯಂತೇ ಽಷ್ಟಾಕ್ಷರಸ್ಯ ಚ ||೩೧||**

**ಕೃದ್ಧ-ಮಹಾ-ವೀರ-ದ್ಯು (ಲ್ಕ)–ಸಹಸ್ರ-ಸಹಿತೋಲ್ಕಕಾಃ**

**ಚತುರ್ಥ್ಯಂತಾ ಹೃದಾದೀನಿ ಪೃಥಗ್ ರೂಪಾಣಿ ತಾನಿ ಚ ||೩೨||**

**ವಿಷ್ಣೋರೇವಾತ್ಮಭೇದೇಽಪಿ ತದೈಶ್ವರ್ಯಾತ್ ತದನ್ಯವತ್ |**

**(ವಿಷ್ಣೋರತ್ಯಂತಾಭೇದೇಽಪಿ ಎಂಬುದು ಛಲಾರೀ ಪಾಠ)**

(ಅರ್ಥ) ಕೃದ್ಧ-ಮಹಾ-ವೀರ-ದ್ಯು-ಸಹಸ್ರ ಈ ಐದು ಶಬ್ದಗಳಿಗೂ ಉಲ್ಕ ಶಬ್ದವನ್ನು ಸೇರಿಸಿದರೆ ಮತ್ತು ಚತುರ್ಥೀ ವಿಭಕ್ತಿಯಲ್ಲಿ ಹೇಳಿದರೆ, ಅಷ್ಟಾಕ್ಷರಸ್ಯ ಚ ಅಂಗಾನಿ ಪ್ರೋಚ್ಯಂತೇ–ನಾರಾಯಣಾಷ್ಟಾಕ್ಷರ ಮಂತ್ರದ ಅಂಗನ್ಯಾಸ ಮಂತ್ರಗಳೆಂದು ಹೇಳಲ್ಪಡುತ್ತವೆ. (ಅಷ್ಟಾಕ್ಷರಸ್ಯ ಚ = ಎಂಬಲ್ಲಿರುವ) ಚಕಾರವು ಅಂಗಾನಿ ಎಂಬುದನ್ನು ಆವೃತ್ತಿ ಮಾಡಿ ಸೇರಿಸಿಕೊಳ್ಳಬೇಕೆಂಬುದನ್ನು ತೋರಿಸುತ್ತದೆ. ಎಂದರೆ ಕೃದ್ಧೋಲ್ಕಾಯ, ಮಹೋಲ್ಕಾಯ, ವೀರೋಲ್ಕಾಯ, ದ್ಯುಲ್ಕಾಯ, ಸಹಸ್ರೋಲ್ಕಾಯ ಎಂಬ ಐದು ಮಂತ್ರಗಳಿಂದ ಪಂಚಾಂಗನ್ಯಾಸ (ಐದು ಅಂಗಗಳಲ್ಲಿ ಮಾತ್ರ ನ್ಯಾಸ) ಮಾಡಿಕೊಳ್ಳಬೇಕು ಎಂದು ಹೇಳಿದಂತಾಯಿತು. ಅಂಗಗಳನ್ನು 'ಹೃದಾದೀನಿ' ಎಂದು ತಿಳಿಸಿದರು. ಎಂದರೆ ಕೃದ್ಧೋಲ್ಕಾಯ ಹೃದಯಾಯ ನಮಃ| ಮಹೋಲ್ಕಾಯ ಶಿರಸೇ ಸ್ವಾಹಾ| ವೀರೋಲ್ಕಾಯ ಶಿಖಾಯೈ ವಷಟ್| ದ್ಯುಲ್ಕಾಯ ಕವಚಾಯ ಹುಮ್| ಸಹಸ್ರೋಲ್ಕಾಯ ಅಸ್ತ್ರಾಯ ಫಟ್| ಎಂದು ಐದು ಅಂಗಗಳಲ್ಲಿ ನ್ಯಾಸಮಾಡಿಕೊಳ್ಳಬೇಕೆಂದು ಹೇಳಿದಂತಾಯಿತು.

ಈ ಕೃದ್ಧೋಲ್ಕಾದಿ ಶಬ್ದಗಳೂ ಭಗವಂತನ ಐದು ಬೇರೆ ಬೇರೆ ರೂಪಗಳೇ ಹೊರತು ಬರೀ ಮಂತ್ರಗಳಲ್ಲ ಎಂದು ಎಚ್ಚರಿಕೆ ಕೊಡುತ್ತಾರೆ — ತಾನಿ ಚ — ಈ ಕೃದ್ಧೋಲ್ಕಾದಿಗಳೂ, ವಿಷ್ಣೋರೇವ ಪೃಥಗ್ ರೂಪಾಣಿ — ವಿಷ್ಣುವಿನ ಬೇರೆ ಬೇರೆ ರೂಪಗಳೇ ಆಗಿವೆ (ಕೇಶವ-ನಾರಾಯಣಾದಿ ರೂಪಗಳೂ, ವಾಸುದೇವಾದಿ ರೂಪಗಳೂ ವಿಶ್ವ-ತೈಜಸಗಳೂ ಹೇಗೆ ವಿಷ್ಣುವಿನ ರೂಪಗಳಾಗಿವೆಯೋ ಹಾಗೆಯೇ ಕೃದ್ಧೋಲ್ಕಾದಿಗಳೂ ವಿಷ್ಣುವಿನ ಬೇರೆ ಬೇರೆ ರೂಪಗಳೇ ಆಗಿವೆಯೆಂದರ್ಥ). ಈ ರೂಪಗಳು ಹೆಚ್ಚು ಪ್ರಸಿದ್ಧಿಯಿಲ್ಲವಲ್ಲ, ಎಂದರೆ ಸಮಾಧಾನ ಹೇಳುತ್ತಾರೆ — ವಿಷ್ಣೋಃ ಅತ್ಯಂತ ಅಭೇದೇಪಿ–ವಿಷ್ಣುವಿನಿಂದ ಅತ್ಯಂತ ಅಭೇದವುಳ್ಳವುಗಳಾದರೂ, ತದೈಶ್ವರ್ಯಾತ್ ಆ ಭಗವಂತನ ಅಚಿಂತ್ಯ ಮಹಿಮೆಯಿಂದ (ಶಕ್ತಿಯಿಂದ, ಮಹತ್ತ್ವದಿಂದ,), ತದನ್ಯವತ್–ಅವನಿಂದ ಬೇರೆ ಇದ್ದಂತೆಯೂ ಆಗಿವೆ. 'ಹೃದಾದೀನಿ' ಎಂಬುದಕ್ಕೆ ಛಲಾರಿ ಆಚಾರ್ಯರು ಈ ಐದು ರೂಪಗಳನ್ನು ಯಾವ ಅಂಗಗಳಲ್ಲಿ ನ್ಯಾಸ ಮಾಡಿಕೊಳ್ಳುತ್ತೇವೋ ಆ ಅಂಗದ

ಹೆಸರೂ ಆಗಿವೆ ಎಂದು ಅರ್ಥಮಾಡಿದ್ದಾರೆ. ಕೃದ್ಧೋಲ್ಕಕ್ಕೆ ಹೃದಯವೆಂದೂ ಮಹೋಲ್ಕಕ್ಕೆ ಶಿರಸ್ಸೆಂದೂ, ವೀರೋಲ್ಕಕ್ಕೆ ಶಿಖಾ ಎಂದೂ (ಇತ್ಯಾದಿ) ಹೆಸರುಗಳಿವೆಯೆಂದು ಹೇಳಿದ್ದಾರೆ.

**51. ಕೃದ್ಧೋಲ್ಕಾದಿ ಶಬ್ದಗಳ ಅರ್ಥ** – (ಇದನ್ನು 'ಮಾಧ್ವಮಂತ್ರ ರತ್ನಾಕರ' ಗ್ರಂಥದ ಆಧಾರದ ಮೇಲೆ ಬೆಳೆಸಿದೆ). ಕೃದ್ಧೋಲ್ಕ ಎಂಬಲ್ಲಿ ಕೃದ್ಧ + ಉಲ್ಕ ಎಂದು ಎರಡು ಅವಯವಗಳಿವೆ. ಕೃದ್ಧ ಎಂಬಲ್ಲಿ ಪುನಃ ಕೃತ್ + ಹ ಎಂದು ಎರಡು ಭಾಗಗಳಿವೆ. ಕ್ರುತ್ ಎಂದರೆ ಕ್ರೋಧ–ಸಿಟ್ಟು, ಕೋಪ ಎಂದರ್ಥ, ಇದು ಧಕಾರಾಂತ ಸ್ತ್ರೀಲಿಂಗ ಕ್ರುಧ್ ಎಂಬುದರ ಪ್ರಥಮೈಕವಚನ ರೂಪ. 'ಕೋಪ–ಕ್ರೋಧಾ–ಮರ್ಷ–ರೋಷ–ಪ್ರತಿಘಾ ರುಟ್ ಕ್ರುಧೌ ಸ್ತ್ರೀಯಾಮ್' ಎಂದು ಅಮರ. ಕೋಪ ಮೊದಲಾದ ಐದು ಶಬ್ದಗಳು ಪುಲ್ಲಿಂಗ. ರುಟ್, ಕ್ರುಧ್ ಎರಡೂ ಸ್ತ್ರೀಲಿಂಗ. ಕ್ರುಧ್–ಕೋಪವನ್ನು, ಹ–ಹಂತಿ–ಪ್ರಾಪಯತೀತಿ ಕೃಧಃ–ಹ–ತರಿಸುವವನು; ಕ್ರೋಧಾಭಿಮಾನಿಯಾದ ದುರ್ಯೋಧನನನಿಗೆ ಕೃದ್ಧ ಎಂದು ಹೆಸರು. ಉಲ್ಕ ಎಂದರೆ ಕೊಳ್ಳಿ, ಉರಿಯದೆ ಬರೀ ಕೆಂಡವಿರುವ ಕಟ್ಟಿಗೆ (ಸೌದೆ). 'ಉಲ್ಕಾ–ಸ್ತ್ವಾನ್ನಿರ್ಗರಜ್ವಾಲಾ' ಅಮರ. ಕೃದ್ಧ–ದುರ್ಯೋಧನನಿಗೆ ಉಲ್ಕಾ– ಕೊಳ್ಳಿಯಂತೆ ಇರುವವನು (ದಹಿಸುವವನು) ಎಂದು ಅರ್ಥ. ಕ್ರುಧ್ ಎಂಬ ಶಬ್ದದ ರಕಾರವು ಉಕಾರವೂ (ರುಕಾರವು) ನಿರುಕ್ತನಿಯಮದಂತೆ ಋಕಾರವಾಗಿ ವ್ಯತ್ಯಾಸವಾಗಿದೆ. 2. ಮಹೋಲ್ಕ ಎಂಬಲ್ಲಿ ಮಹಾ + ಉ + ಲ + ಕ ಎಂದು ನಾಲ್ಕು ಅವಯವಗಳಿವೆ. ಮಹಾ–ಮಹಂತೌ–ಮಹಾತ್ಮರಾದ, ಉಶ್ಚಲಶ್ಚ ಉಲೌ–ರುದ್ರೇಂದ್ರೌಮಹೋಲೌ. ಉಕಾರವು ರುದ್ರನನ್ನು ಹೇಳುತ್ತದೆ – 'ಉ ಕಾರಃ ಶಂಕರಃ ಪ್ರೋಕ್ತಃ' ಎಂದು ಏಕಾಕ್ಷರಕೋಶ. ಲ ಎಂದರೆ ಇಂದ್ರ. 'ಲಃ ಶಕ್ರೇ ಲಾ ತು ದಾನೇ' ಎಂದು ಮೇದಿನೀ ಕೋಶ ಹೇಳುತ್ತದೆ. ಮಹಾ–ಮಹಾತ್ಮರಾದ, ಉ– ರುದ್ರ ದೇವರಿಗೂ, ಲ–ಇಂದ್ರನಿಗೂ. ಕಂ–ಸುಖವು ಯಾರಿಂದ ಆಗುವುದೋ ಅವನು ಮಹೋಲ್ಕ. 'ಕಂ ಸುಖಂ' ಚ ಪ್ರಕೀರ್ತಿತಮ್ – ಏಕಾಕ್ಷರ ಕೋಶ. ಸುಖ–ಶೀರ್ಷ–ಜಲೇಷು ಕಮ್' –ಮೇದಿನೀಕೋಶ. 3. ವೀರೋಲ್ಕ ಎಂಬಲ್ಲಿ ವೀರ + ಉ + ಲ + ಕ ಎಂದು ನಾಲ್ಕು ಭಾಗಗಳಿವೆ. ವೀರಾಣಾಂ–ಋಜೂಣಾಂ, ಉಂ–ಉತ್ಕೃಷ್ಟಂ, ಲಂ-ಅಮೃತಂ, ಕಾಯತಿ–ದದಾಮೀತಿ ಪ್ರತಿಜಾನೀತೇ ವೀರೋಲ್ಕಃ । ವೀರ ಎಂಬುದು ಬ್ರಹ್ಮಪದವಿಗೆ ಬರುವ ಇನ್ನೂರು ಮಂದಿ ಋಜುಗಣದವರ ಸಂಕೇತ. ವೀರ–ಋಜುಗಣದವರಿಗೆ, ಉ– ಉತ್ಕೃಷ್ಟವಾದ, ಲ–ಅಮೃತವನ್ನು (ಮೋಕ್ಷವನ್ನು), ಕ–ಕೊಡುವೆನೆಂದು ಪ್ರತಿಜ್ಞೆ ಮಾಡಿದವನೆಂದು ಅರ್ಥ. 'ಲಕಾರಸ್ತ್ವಮೃತೇ ಸ್ಮೃತಃ' ಎಂದು ಧನಂಜಯ ಕೋಶ. 4. ದ್ಯುಲ್ಕ ಎಂಬಲ್ಲಿ ದ್ಯು + ಉಲ್ಕ ಎಂದು ಎರಡು ಪದಗಳಿವೆ. ದ್ಯೋ ದಿವ್ತ ದ್ವೇ ಸ್ತ್ರಿಯಾಮ್' ಎಂದು ಅಮರವಿರುವುದರಿಂದ ದ್ಯು ಎಂದರೆ ಸ್ವರ್ಗಲೋಕ, ಉಪಲಕ್ಷಣಯಾ ಹದಿನಾಲ್ಕು ಲೋಕಗಳಿಗೂ, ಉಲ್ಕ – ಪ್ರಕಾಶ ಕೊಡುವವನು

ಎಂದರ್ಥ. ದ್ಯು + ಉಲ್ಕಾ ಸೇರಿ ಸವರ್ಣ ಸಂಧಿಯಾಗದೆ ಹ್ರಸ್ವ ರೂಪವಿರುವುದು ಛಾಂದಸವೆಂದು ತಿಳಿಯಬೇಕು. 5. ಸಹಸ್ರೋಲ್ಕ ಎಂಬಲ್ಲಿ ಸಹಸ್ರ ಶಬ್ದವು ಅನಂತವಾಚಕ. ಸಹಸ್ರ –ಅನಂತವಾದ, ಉಲ್ಕ–ಕೊಳ್ಳಿಗಳಂತಿರುವ ಕಾಂತಿ ವಿಶೇಷವುಳ್ಳವನೆಂದರ್ಥ.

52. ನಮಃ ಹುಂ, ಫಟ್ ಇತ್ಯಾದಿ ಶಬ್ದಗಳ ಅರ್ಥ: — ಹೀಗೆಯೇ ಓಂ ನಮೋ ನಾರಾಯಣಾಯ — ಎಂಬಲ್ಲಿ ಓಂಕಾರದ ಅರ್ಥವನ್ನು ಪ್ರಣವಮಂತ್ರ ನಿರೂಪಣೆಯಲ್ಲಿ ಹೇಳಿದೆ. ನಾರಾಯಣ ಶಬ್ದಾರ್ಥವನ್ನೂ ಹಿಂದೆ (ಪ್ರಾರಂಭದಲ್ಲಿ) ಹೇಳಿದೆ. ಆದ್ದರಿಂದ 'ನಮಃ' ಶಬ್ದಾರ್ಥವನ್ನು ಈಗ ಹೇಳುವೆವು. ಅನುವ್ಯಾಖ್ಯಾನದಲ್ಲಿ ಪ್ರಥಮಾಧ್ಯಾಯ ಚತುರ್ಥಪಾದದಲ್ಲಿ ಜ್ಯೋತಿರಧಿಕರಣದಲ್ಲಿ ನಮಃ, ಹುಮ್, ಕವಚಾಯ, ಫಟ್, ವಷಟ್, ವೌಷಟ್, ಸ್ವಾಹಾ ಇತ್ಯಾದಿ ಎಲ್ಲ ಶಬ್ದಗಳಿಗೂ ವಿಷ್ಣು ಪರವಾಗಿ ಅರ್ಥ ಹೇಳಿದ್ದಾರೆ: —

ಹರಿರ್ ಹುಂ ಚ ಹುತಮಸ್ಮಿನ್ ಜಗದ್ಯತಃ ।
ಸ್ಫುಟತ್ವಾತ್ ಫಡಿತಿ ಪ್ರೋಕ್ತಃ ಕವ ರಕ್ಷಣ ಇತ್ಯತಃ ॥
ಕವಚಂ ವರ್ತತೇ ಯಸ್ಮಾತ್ ಷಡ್ಗುಣತ್ವೇನ ಸರ್ವದಾ
ವಿಷತ ತದ್ಗತತ್ವತಸ್ತೇಷಾಂ ವೌಷಡಿತ್ಯೇವ ಕಥ್ಯತೇ ॥ ೨ ॥
ಸ್ವೀಯಂ ಸ್ವೀಕುರುತೇ ಯಸ್ಮಾತ್ ಸ್ವಾಹೇತ್ಯುಕ್ತೋ ಜನಾರ್ದನಃ
ನಮಂತ್ಯಸ್ಮಿನ್ ಗುಣಾ ಯಸ್ಮಾ–ನ್ನಮ ಇತ್ಯೇವ ಕಥ್ಯತೇ ॥ ೩ ॥

೧. (ಕವಚಾಯ ಹುಂ ಎಂಬಲ್ಲಿರುವ ಹುಂಶಬ್ದಾರ್ಥ ಹೇಳುತ್ತಾರೆ) ಸಕಲ ಜಗತ್ತುಗಳೂ ಇವನಲ್ಲಿ ಹುತವಾಗಿ (ಆಶ್ರಿತವಾಗಿ) ಇರುವುದರಿಂದ ಆ ವಿಷ್ಣುವಿಗೇ ಹುಮ್ ಎಂದು ಹೆಸರು ೨. ಅಸ್ತ್ರಾಯ ಫಟ್ ಎಂಬಲ್ಲಿರುವ ಫಟ್ ಶಬ್ದಾರ್ಥ ಹೇಳುತ್ತಾರೆ. ತನ್ನ ಸ್ವರೂಪವು ತನಗೆ ಚೆನ್ನಾಗಿ–ಸ್ಫುಟವಾಗಿ–ಸ್ಪಷ್ಟವಾಗಿ–ಯಾವ ಸಂದೇಹವೂ ಇಲ್ಲದೆ ಸಂಪೂರ್ಣವಾಗಿ ತಿಳಿದಿರುವುದರಿಂದ ಫಟ್ ಎಂದು ಕರೆಯಲ್ಪಡುತ್ತಾನೆ. ೩. ಕವಚಾಯ ಹುಂ ಎಂಬಲ್ಲಿ ಕವಚ ಶಬ್ದಾರ್ಥ ಹೇಳುತ್ತಾರೆ — 'ಕವ ರಕ್ಷಣೆ' ಎಂದು ಧಾತುಪಾಠವಿರುವುದರಿಂದ ಕವ ಎಂದರೆ ರಕ್ಷಿಸು ಎಂದರ್ಥ. ಆ ಸ್ವಾಮಿ ರಮಾಬ್ರಹ್ಮಾದಿ ಸಕಲ ಜಗತ್ತಿಗೂ ರಕ್ಷಕನಾಗಿರುವುದರಿಂದ ಅವನಿಗೆ 'ಕವಚ' ಎಂದು ಹೆಸರು. (ಕವಚ ಎಂದರೆ ಅಂಗಿ ಎಂದೂ ಮುಚ್ಚಳ ಎಂದೂ ಅರ್ಥವಾಗುತ್ತದೆ. ಆ ಶಬ್ದಕ್ಕೂ ಇದೇ ಅರ್ಥ) ೪. ಶಿಖಾಯೈ ವಷಟ್ ಎಂಬಲ್ಲಿರುವ ವಷಟ್ ಶಬ್ದಾರ್ಥ ಹೇಳುತ್ತಾರೆ–ವಷಟ್ ಎಂಬಲ್ಲಿ ವ + ಷಟ್ ಎಂದು ಎರಡು ಭಾಗವಿದೆ. ಷಟ್ ಎಂದರೆ ಐಶ್ವರ್ಯ, ವೀರ್ಯ, ಯಶಸ್, ಶ್ರೀ (ಕಾಂತಿ), ಜ್ಞಾನ, ವಿಜ್ಞಾನ ಎಂಬ ಷಡ್ಗುಣಗಳೆಂದರ್ಥ. ಷಟ್–ಷಡ್ಗುಣಗಳು, ಎಂದರೆ ನಿತ್ಯವಾಗಿಯೂ ಪರಿಪೂರ್ಣವಾಗಿಯೂ (ಅನಂತವಾಗಿಯೂ) ವರ್ತತೇ–ಇರುವುದರಿಂದ ಅವನಿಗೆ ವಷಟ್ ಎಂದು ಹೆಸರು.

೫. ಶಿಖಾಯೈ ವಷಟ್ ಎಂಬಂತೆ ನೇತ್ರಾಭ್ಯಾಂ ವೌಷಟ್ ಎಂದು ಷಡಂಗನ್ಯಾಸದಲ್ಲಿ ಹೇಳುತ್ತೇವೆ. ಅದರ ಅರ್ಥವನ್ನೂ ಹೇಳುತ್ತಾರೆ—'ವಿಃ ಪಕ್ಷಿ–ಪರಮಾತ್ಮನೋಃ' ಎಂದು. ವಿಶ್ವಕೋಶದಲ್ಲಿ ವಿ ಎಂದರೆ ಪಕ್ಷಿ ಎಂದೂ ವಿಷ್ಣು ಎಂದೂ ಎರಡರ್ಥ ಹೇಳಿದೆ. ನಾಮೈಕ ದೇಶಗ್ರಹಣೇ ನಾಮಸಾಮ್ಯಂ ಎಂಬ ನಿಯಮದಂತೆ ಒಂದು ಹೆಸರಿನ ಭಾಗಕ್ಕೂ ಹೆಸರಿನ ಅರ್ಥವೇ ಇರುತ್ತದೆ—ಉದಾಹರಣೆಗೆ ಕೃಷ್ಣಮೂರ್ತಿ ಎಂಬುವವನನ್ನು ಕೃಷ್ಣ ಎಂದೂ ರಾಮಸ್ವಾಮಿ ಎಂಬುವನನ್ನು ಸ್ವಾಮಿ ಎಂದೂ ಕರೆಯುವಂತೆ ವಿಷ್ಣುವನ್ನೇ ವಿ ಎಂದೂ ಕರೆಯಬಹುದು; ಹಾಗೂ ವಿ ಎಂದರೆ ವಿಷ್ಣು ಎಂದೇ ಅರ್ಥವಾಗುತ್ತದೆ. ವಿ ಶಬ್ದದ ಸಪ್ತಮೀ ಏಕವಚನ ರೂಪವೇ 'ವೌ'. ಆದ್ದರಿಂದ ವೌ–ವಿಷ್ಣುವಿನಲ್ಲಿ ಇರುವ ಷಟ್ –ಷಡ್ಗುಣಗಳನ್ನೇ ವೌಷಟ್ ಶಬ್ದ ಹೇಳುತ್ತದೆ. ಭಗವಂತನ ಗುಣಗಳಿಗೂ ಭಗವಂತನಿಗೂ ಭೇಧವಿಲ್ಲವಾದ್ದರಿಂದ ವೌಷಟ್ ಎಂಬುದೂ ವಿಷ್ಣುವಿನ ಹೆಸರೇ ಆಗುತ್ತದೆ. ೬. ಸ್ವಾಹಾ ಶಬ್ದದ ಅರ್ಥವನ್ನು ಹಂಸ ಷಡಕ್ಷರ ಮಂತ್ರದ ಪೀಠಿಕೆಯಲ್ಲೇ ಹೇಳಿದೆ. ಸ್ವ–ತನ್ನದನ್ನು, ಆ ಹ (=ಆ ಹೃ) ಸ್ವೀಕರಿಸುವುದರಿಂದ ಸ್ವಾಹಾ ಎಂಬುದೂ ವಿಷ್ಣುವಿನ ಹೆಸರು. ೭. ಕಡೆಯದಾಗಿ ನಮಃ ಶಬ್ದವು ನಮ್ ಧಾತುವಿನ ರೂಪಾಂತರ. ಸಂಸ್ಕೃತದಲ್ಲಿ ನಮ್ ಧಾತುವಿಗೆ ಬಗ್ಗು ಅಥವಾ ಬಾಗು (ಕೆಳಮುಖವಾಗಿ ತಿರುಗು, ಎಂದೂ ಅರ್ಥವಿದೆ. ಅವನಲ್ಲಿ ಎಲ್ಲಾ ಗುಣಗಳೂ ಬಂದು ಬಗ್ಗುವುದರಿಂದ ಅವನಿಗೆ (ವಿಷ್ಣುವಿಗೆ) ನಮಃ ಎಂದು ಹೆಸರು. ಐಶ್ವರ್ಯ, ಶಕ್ತಿ, ಬಲ, ಔದಾರ್ಯ, ಪ್ರಕಾಶ, ಜ್ಞಾನ, ಆನಂದ ಮೊದಲಾದ ಎಲ್ಲ ಗುಣಗಳೂ ಮನುಷ್ಯರಿಗಿಂತ ಋಷಿಗಳಿಗೆ ಹೆಚ್ಚು, ಋಷಿಗಳಿಗಿಂತ ದೇವತೆಗಳಿಗೆ ಹೆಚ್ಚು. ದೇವತೆಗಳಲ್ಲೂ ಇಂದ್ರನಿಗಿಂತ ರುದ್ರನಲ್ಲಿ ಹೆಚ್ಚು, ರುದ್ರನಿಗಿಂತ ಬ್ರಹ್ಮನಲ್ಲೂ ಬ್ರಹ್ಮನಿಗಿಂತ ಲಕ್ಷ್ಮೀಯಲ್ಲಿ ಹೆಚ್ಚು–ಹೀಗೆ ಹೆಚ್ಚುತ್ತಾ ಹೆಚ್ಚುತ್ತಾ ಹೋಗಿ ವಿಷ್ಣುವಿನಲ್ಲಿ–ಅವನ ಸಮನಾಗಲಿ ಅಧಿಕನಾಗಲಿ ಇಲ್ಲವಾದ್ದರಿಂದ ಬಗ್ಗಿಬಿಡುತ್ತವೆ. ಆದ್ದರಿಂದ ವಿಷ್ಣುವಿಗೆ ನಮಃ ಎಂದು ಹೆಸರು. ಹೀಗೆ ಅಂಗನ್ಯಾಸಾದಿಗಳಲ್ಲಿರುವ ಸಕಲ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆ ಎಂದು ತಿಳಿದುಕೊಂಡು ಜಪಾನುಷ್ಠಾನ ಮಾಡಿದರೆ ಫಲಾಧಿಕ್ಯ ಬರುತ್ತದೆ.

ಇದಕ್ಕೂ ಹೆಚ್ಚಿನ ವಿವರಣೆ ಬೇಕಾದಂತವರು ಶ್ರೀಮನ್ನ್ಯಾಯಸುಧಾದಲ್ಲೂ ರಾಘವೇಂದ್ರಸ್ವಾಮಿಗಳ ಶ್ರೀಸುಧಾಪರಿಮಳದಲ್ಲೂ ಅದನ್ನು ನೋಡಬಹುದು.

**53.** ಕರನ್ಯಾಸ—ಅಂಗನ್ಯಾಸದ ಮಂತ್ರಗಳೇ ಕರನ್ಯಾಸಕ್ಕೂ ಬರುವುದರಿಂದ ಕರನ್ಯಾಸವನ್ನು ಬೇರೆ ಹೇಳಲಿಲ್ಲ— ಮುಂದೆಯೂ ಹೀಗೆಯೇ 'ನ್ಯಾಸ' ಎಂದು ಹೇಳಿದಲ್ಲೆಲ್ಲಾ ಅಂಗನ್ಯಾಸ–ಕರನ್ಯಾಸ ಎರಡನ್ನೂ ತಿಳಿದುಕೊಳ್ಳಬೇಕು. ಅಂಗನ್ಯಾಸದಲ್ಲಿ ನಮಃ ಸ್ವಾಹಾ ವಷಟ್ ಇತ್ಯಾದಿ ಪದಗಳು (ಉಪಪದಗಳು) ಬಂದದ್ದರಿಂದ ಎಲ್ಲದಕ್ಕೂ 'ನಮಃ' ಸೇರಿಸಲಿಲ್ಲ. ಕರನ್ಯಾಸದಲ್ಲಿ ಎಲ್ಲದಕ್ಕೂ

'ನಮಃ' ಸೇರಿಸಿಯೇ ಕರನ್ಯಾಸ ಮಾಡಿಕೊಳ್ಳಬೇಕು. ಹೇಗೆಂದರೆ — ಓಂ ಕೃದ್ಧೋಲ್ಕಾಯ ಅಂಗುಷ್ಠಾಭ್ಯಾಂ ನಮಃ। ಓಂ ಮಹೋಲ್ಕಾಯ ತರ್ಜನೀಭ್ಯಾಂ ನಮಃ। ಓಂ ವೀರೋಲ್ಕಾಯ ಮಧ್ಯಮಾಭ್ಯಾಂ ನಮಃ। ಓಂ ದ್ಯುಲ್ಕಾಯ ಅನಾಮಿಕಾಭ್ಯಾಂ ನಮಃ। ಓಂ ಸಹಸ್ರೋಲ್ಕಾಯ ಕನಿಷ್ಠಿಕಾಭ್ಯಾಂ ನಮಃ॥

**54.** ವರ್ಣದೇವತಾಧ್ಯಾನ — ಪ್ರಣವದ ವರ್ಣನ್ಯಾಸ ಹೇಳುವಾಗ, 'ತದ್ವರ್ಣದೇವತಾಧ್ಯಾನಪೂರ್ವಕಮ್' ಎಂದು ಹೇಳಿದ್ದರಿಂದ ಉಪಲಕ್ಷಣಯಾ ಕೃದ್ಧೋಲ್ಕಾದಿ ಭಗವದ್ರೂಪಗಳನ್ನು ನ್ಯಾಸಮಾಡಿಕೊಳ್ಳುವಾಗಲೂ ಆ ರೂಪಗಳ ಧ್ಯಾನ ಶ್ಲೋಕಗಳನ್ನು ಹೇಳಿಕೊಳ್ಳಬೇಬೇಕು ಎಂದು ಅರ್ಥವಾಗುತ್ತದೆ. ಆದ್ದರಿಂದಲೇ ತಂತ್ರಸಾರದಲ್ಲಿ ಕೃದ್ಧೋಲ್ಕಾದಿಗಳ ಧ್ಯಾನವನ್ನೂ ಬೇರೆ ಹೇಳಿದ್ದಾರೆ — (೧ಅ. ೩೩-೩೪ ಶ್ಲೋ)

**ಚಕ್ರಶಂಖವರಾಭೀತಿ — ಹಸ್ತಾನ್ಯೇತಾನಿ ಸರ್ವಶಃ।**
**ಮೂಲ ರೂಪ ಸವರ್ಣಾನಿ ಕೃಷ್ಣವರ್ಣಾ ಶಿಖೋಚ್ಯತೇ ॥**

(ಅರ್ಥ) ಏತಾನಿ ಸರ್ವಶಃ ಐದು ರೂಪಗಳು ಎಲ್ಲವೂ ನಾಲ್ಕು ಕೈಗಳುಳ್ಳವು; ಮತ್ತು ಆ ಕೈಗಳಲ್ಲಿ (ಬಲಗಡೆ ಮೇಲ್ಗೈಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ) ಚಕ್ರ-ಶಂಖ ವರ ಮತ್ತು ಅಭಯ ಮುದ್ರೆಗಳನ್ನು ಧರಿಸಿವೆ. ಎಲ್ಲವೂ (ಒಂದನ್ನು ಬಿಟ್ಟು) ಮೂಲರೂಪದಂತೆ (ಎಂದರೆ ನಾರಾಯಣ ರೂಪದಂತೆ) ಇರುವ ಬಣ್ಣವುಳ್ಳುವು — ನಾರಾಯಣ ರೂಪವು ಹೇಗೆ 'ಉದ್ಯದ್‌ಭಾಸ್ವತ್ ಸಮಾಭಾಸಃ—ಉದಯಿಸುತ್ತಿರುವ ಸೂರ್ಯನಿಗೆ ಸಮಾನವಾದ ಹೊಂಗೆಂಪು ಬಣ್ಣವುಳ್ಳದ್ದೋ ಈ ನಾಲ್ಕೂ ಅದರಂತೆಯೇ ಹೊಂಗೆಂಪು ಬಣ್ಣವುಳ್ಳವು. ಆದರೆ ಶಿಖಾ ಎಂದರೆ ಶಿಖಾಯೈ ವಷಟ್ ಎಂದು ಹೇಳಿಕೊಳ್ಳುವ 'ವೀರೋಲ್ಕ' ಎಂಬ ರೂಪವು ಮಾತ್ರ ಕೃಷ್ಣವರ್ಣವುಳ್ಳದ್ದು (ಕಪ್ಪು ಬಣ್ಣವುಳ್ಳದ್ದು) ಎಂದು ಹೇಳಲ್ಪಡುತ್ತದೆ.

ಹೀಗೆ ಅಂಗನ್ಯಾಸ-ಕರನ್ಯಾಸ ಕ್ರಮವನ್ನು ಹೇಳಿದ ನಂತರ ವರ್ಣನ್ಯಾಸ ವಿಧಾನವನ್ನು ಹೇಳುತ್ತಾರೆ.

**55.** ನಾರಾಯಣಾಷ್ಟಾಕ್ಷರ ಮಂತ್ರದ ವರ್ಣನ್ಯಾಸ — ನಾರಾಯಣಾಷ್ಟಾಕ್ಷರ ಮಹಾಮಂತ್ರದಲ್ಲಿ ಎಂಟು ಅಕ್ಷರಗಳಿರುವುದರಿಂದ ಆ ಎಂಟು ವರ್ಣಗಳನ್ನು ಈ ಎಂಟು ಅಂಗಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕೆಂದು ಹೇಳುತ್ತಾರೆ —

**ಪಜ್ಜಾನು-ನಾಭಿ-ಹೃದಯ — ವಾಙ್ನಾಸಾ-ನೇತ್ರ-ಕೇಷು ಚ।**
**ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾತ್ (೧ಅ. ೩೭ ಶ್ಲೋ)**

(ಪದಚ್ಛೇದ) — ಪತ್– ಜಾನು– ನಾಭಿ– ಹೃದಯ– ವಾಕ್– ನಾಸಾ– ನೇತ್ರ –ಕೇಷು (ಅರ್ಥ) ಪತ್–ಎರಡು ಪಾದಗಳಲ್ಲೂ (ಕಡೆಯಲ್ಲಿ 'ಕೇಷು' ಎಂದು ಸಪ್ತಮೀ ವಿಭಕ್ತಿ ಇರುವುದರಿಂದ ಎಲ್ಲದಕ್ಕೂ ಸಪ್ತಮ್ಯರ್ಥವನ್ನೇ ಹೇಳಬೇಕು). ಜಾನು–ಎರಡು ಮಂಡಿಗಳಲ್ಲೂ, ನಾಭಿ–ನಾಭಿಯಲ್ಲೂ, ಹೃದಯ–ಹೃದಯದಲ್ಲೂ, ವಾಕ್–ಬಾಯಿಯಲ್ಲೂ ನಾಸಾ–ಮೂಗಿನ ಎರಡು ಪಕ್ಕಗಳಲ್ಲೂ, ನೇತ್ರ –ಎರಡು ಕಣ್ಣುಗಳಲ್ಲೂ, ಕೇಷು ಚ — ತಲೆ(ನೆತ್ತಿ)ಯಲ್ಲೂ, ಅಷ್ಟಾಕ್ಷರಾಣಾಂ–ನಾರಾಯಣಾಷ್ಟಕ್ಷರದ ಎಂಟು ವರ್ಣಗಳನ್ನು ನ್ಯಾಸಃ–ನ್ಯಾಸವು ಸ್ಯಾತ್ –ಆಗಬೇಕು.

ಯಾವಾಗಲೂ ತಂತ್ರಸಾರದಲ್ಲಿ ಕೊಟ್ಟಿರುವ ಕ್ರಮ ಯತಿಗಳಿಗೆ ಉಪಯೋಗವಾಗುವ ಲಯಕ್ರಮ. ಇದಕ್ಕೆ ವಿರುದ್ಧವಾದ (ವ್ಯುತ್ಕ್ರಮ ಅಥವಾ ಪ್ರತಿಲೋಮ) ಕ್ರಮವು ಸೃಷ್ಟಿಕ್ರಮ, ಅರ್ಧ (ಮೊದಲ ಅರ್ಧ) ವ್ಯುತ್ಕ್ರಮ ಮಾಡಿ, ಮಿಕ್ಕ ಅರ್ಧವನ್ನು ಅನುಲೋಮವಾಗಿ ಮಾಡುವುದು ಸ್ಥಿತಿಕ್ರಮ. ಒಂದೊಂದೇ ಕ್ರಮ ಮಾಡಿಕೊಳ್ಳುವುದಿದ್ದರೆ ಬ್ರಹ್ಮಚಾರಿಗಳು ಸೃಷ್ಟಿಕ್ರಮವನ್ನು (ಪ್ರಾಯಶಃ ಈ ಕ್ರಮವನ್ನು ಯಾವ ಮಂತ್ರ ಪುಸ್ತಕವೂ ತೋರಿಸುವುದಿಲ್ಲ). ಗೃಹಸ್ಥರು ಸ್ಥಿತಿಕ್ರಮವನ್ನೂ (ಎಲ್ಲಾ ಪುಸ್ತಕಗಳೂ ಪ್ರಾಯಶಃ ಈ ಕ್ರಮವನ್ನೇ ಎಲ್ಲ ಮಂತ್ರಗಳಿಗೂ ತೋರಿಸುತ್ತಾರೆ) ಯತಿಗಳು ಲಯ ಕ್ರಮವನ್ನೂ ಮಾಡಿಕೊಳ್ಳಬೇಕು.

**56. <u>ಬೆಟ್ಟುಗಳ ಕ್ರಮ</u>:** — ಟಿ. ಆರ್. ಕೃಷ್ಣಾಚಾರ್ಯರ 'ಮಾಧ್ವ ಮಂತ್ರ ರತ್ನಾಕರ'ವೂ ಕುಂಭಕೋಣದ ರಾ. ಗುರುರಾಜಾಚಾರ್ಯರ 'ಅಷ್ಟ ಮಹಾಮಂತ್ರ' ಪುಸ್ತಕವೂ ಈ ಬೆಟ್ಟುಗಳ ಕ್ರಮವನ್ನು ತೋರಿಸುತ್ತವೆ; ಮಿಕ್ಕ ಮಂತ್ರಪುಸ್ತಕಗಳಲ್ಲಿ ಅದರ ಪ್ರಸ್ತಾಪವೇ ಇಲ್ಲ. ಶಿರಸ್ಸಿನಲ್ಲಿ ಮಧ್ಯಮಾಂಗುಲಿಯಿಂದಲೂ (ನಡುಬೆಟ್ಟಿನಿಂದಲೂ), ಕಣ್ಣುಗಳಲ್ಲಿ ತರ್ಜನೀ ಮಧ್ಯಮ (ತರ್ಜನೀ ಬೆಟ್ಟು–ಇದನ್ನು ತೋರು ಬೆಟ್ಟು ಎಂದೂ ಕರೆಯುವುದುಂಟು–ತೋರಿಸುವಾಗ ಈ ಬೆಟ್ಟನ್ನೇ ಉಪಯೋಗಿಸುತ್ತೇವೆ–ಮತ್ತು ನಡು) ಬೆಟ್ಟುಗಳಿಂದಲೂ ಮೂಗಿನ ಪಕ್ಕಗಳಲ್ಲಿ ಅಂಗುಷ್ಠ– ಅನಾಮಿಕಾ (ಹೆಬ್ಬೆಟ್ಟು–ಉಂಗುರದ) ಬೆಟ್ಟುಗಳಿಂದಲೂ ಬಾಯಲ್ಲಿ (ಎಂದರೆ ತುಟಿಗಳ ಮೇಲೆ) ಅಂಗುಷ್ಠ– ತರ್ಜನೀ (ಹೆಬ್ಬೆಟ್ಟು ತರ್ಜನೀ) ಬೆಟ್ಟುಗಳಿಂದಲೂ, ಹೃದಯದಲ್ಲಿ ಅಂಗುಷ್ಠ ಕನಿಷ್ಠಿಕಾಭ್ಯಾಂ (ಹೆಬ್ಬೆಟ್ಟು–ಕಿರಿಬೆಟ್ಟುಗಳಿಂದಲೂ) ನಾಭಿಯಲ್ಲಿ ಅಂಗುಷ್ಠವರ್ಜ ಚತುರಂಗುಲೀನಾಮಧಃ ಅಂಗುಷ್ಠೇನ (ನಾಲ್ಕು ಬೆಟ್ಟುಗಳ ಕೆಳಗೆ ಹೆಬ್ಬೆಟ್ಟನ್ನು ಇಟ್ಟುಕೊಂಡೂ) ಮಂಡಿಯಲ್ಲೂ ಪಾದಗಳಲ್ಲೂ ಐದೂ ಬೆಟ್ಟುಗಳನ್ನು ಸೇರಿಸಿಕೊಂಡೂ ನ್ಯಾಸ ಮಾಡಬೇಕು. ಯಾವ ಕ್ರಮವಾಗಲಿ–ಸೃಷ್ಟಿ, ಸ್ಥಿತಿ, ಲಯ ಮೂರರಲ್ಲೂ ಈ ಅಂಗಗಳಲ್ಲಿ ಈ ಬೆಟ್ಟುಗಳಿಂದಲೇ ನ್ಯಾಸ ಮಾಡಬೇಕು. ಒಂದು ವಾರ (ಸಪ್ತಾಹ) ನ್ಯಾಸ ಮಾಡಿಕೊಳ್ಳುವುದರಲ್ಲಿ ಈ ಅಂಗಗಳಲ್ಲಿ ಆಯಾ ಬೆಟ್ಟುಗಳು ತಮಗೆ ತಾವೇ

ಹೋಗಿಬಿಡುತ್ತವೆ. ಆದರೆ ಬೆಟ್ಟುಗಳ ಹೆಸರನ್ನಾಗಲಿ ಅಂಗಗಳ ಹೆಸರನ್ನಾಗಲಿ ಬಾಯಲ್ಲಿ ಉಚ್ಚರಿಸಬಾರದು. ಮಂತ್ರದ ವರ್ಣಗಳನ್ನೂ ತತ್ತ್ವಮೂರ್ತಿಗಳನ್ನೂ ಹೇಳಿಕೊಳ್ಳುತ್ತಾ ಆಯಾ ಅಂಗಗಳಲ್ಲಿ ಆಯಾ ಬೆಟ್ಟುಗಳಿಂದ ನ್ಯಾಸ ಮಾಡಿಕೊಳ್ಳಬೇಕು.

**57. ಸಂಖ್ಯೆಯಿಂದ ನಿರೂಪಣೆ:** — ನ್ಯಾಸ ಮಾಡಿಕೊಳ್ಳುವಾಗ ಕೇವಲ ಬಲಗೈಯನ್ನೇ ಉಪಯೋಗಿಸಬೇಕು. ಬಲಗೈಯಲ್ಲಿ ಐದು ಬೆಟ್ಟುಗಳಿರುವುದರಿಂದ, 1 ಎಂಬ ಸಂಖ್ಯೆ ಹೆಬ್ಬೆಟ್ಟನ್ನೂ 2 ಎಂಬ ಸಂಖ್ಯೆ ತರ್ಜನೀ (ತೋರು) ಬೆಟ್ಟನ್ನೂ 3 ಎಂಬ ಸಂಖ್ಯೆ ನಡು ಬೆಟ್ಟನ್ನೂ 4 ಎಂಬ ಸಂಖ್ಯೆ ಉಂಗುರದ (ಅನಾಮಿಕಾ) ಬೆಟ್ಟನ್ನೂ 5 ಎಂಬ ಸಂಖ್ಯೆ ಕಿರಿಬೆರಳನ್ನು (ಕನಿಷ್ಠವನ್ನೂ) ತೋರಿಸುತ್ತವೆಯಷ್ಟೆ. ಆಗ ಶಿರಸ್ಸಿನಲ್ಲಿ ನಡುಬೆಟ್ಟಿನಿಂದ ನ್ಯಾಸ ಮಾಡಿಕೊಳ್ಳಬೇಕೆಂಬುದನ್ನು ಶಿರಸ್೩ ಎಂದು ಸುಲಭವಾಗಿ ತೊಡಕಾಗದಂತೆ ತೋರಿಸಬಹುದು. ಹೀಗೆಯೇ ಕಣ್ಣುಗಳನ್ನು ತರ್ಜನೀ ಮಧ್ಯಮಾ ಬೆಟ್ಟುಗಳಿಂದ ಮಾಡಬೇಕೆಂಬುದನ್ನು ನೇತ್ರ–2-3 ಎಂದು ಸುಲಭವಾಗಿ ತೋರಿಸಬಹುದು. ಇದೇ ರೀತಿ ನಾಭಿಯಲ್ಲಿ ತರ್ಜನ್ಯಾದಿ ನಾಲ್ಕು ಬೆಟ್ಟುಗಳ ಕೆಳಗೆ ಹೆಬ್ಬೆಟ್ಟು ಇಟ್ಟುಕೊಳ್ಳಬೇಕೆಂಬುದನ್ನು $\frac{2-5}{1}$ ಎಂಬ ಸಂಕೇತದಿಂದ ಐದೂ ಬೆಟ್ಟುಗಳನ್ನು ಸೇರಿಸಿ ಇಟ್ಟುಕೊಳ್ಳಬೇಕೆಂಬುದನ್ನು 1–5 ಎಂದೂ ತೋರಿಸಬಹುದು. ಕೆಳಗೆ ಸೃಷ್ಟ್ಯಾದಿಕ್ರಮಗಳನ್ನು ತೋರಿಸುವಾಗ ಈ ಸಂಖ್ಯಾಕ್ರಮವನ್ನೇ ಉಪಯೋಗಿಸಿದ್ದೇವೆ. ಸ್ವಲ್ಪ ಗಮನಿಸಿದರೆ ಸುಖವಾಗಿ ಅರ್ಥವೂ ಆಗುತ್ತದೆ. ತೋರಿಸುವುದೂ ಸುಲಭ.

**58. ವರ್ಣನ್ಯಾಸದ ಮೂರು ಕ್ರಮಗಳು:** — ಈಗ ಸೃಷ್ಟಿ–ಸ್ಥಿತಿ–ಲಯಕ್ರಮದಂತೆ ವರ್ಣನ್ಯಾಸವನ್ನು ತೋರಿಸಲಾಗಿದೆ.

| ಮಂತ್ರ | ಸೃಷ್ಟಿ | ಸ್ಥಿತಿ | ಲಯ |
|---|---|---|---|
| ಓಂ ಓಂ ವಿಶ್ವಾಯ ನಮಃ | ಶಿರಸಿ (3) | ಶಿರಸಿ (3) | ಪಾದಯೋಃ (1–5) |
| ಓಂ ನಂತೈಜಸಾಯ ನಮಃ | ನೇತ್ರಯೋಃ (2+3) | ನೇತ್ರ (2+3) | ಜಾನ್ವೋಃ (1–5) |
| '' ಮೋಂ ಪ್ರಾಜ್ಞಾಯ ನಮಃ | ನಾಸಯೋಃ (1+4) | ನಾಸಾ (1+4) | ನಾಭೌ $\frac{2-5}{1}$ |
| '' ನಾಂ ತುರ್ಯಾಯ ನಮಃ | ಆಸ್ಯೇ (ವಾಕ್) (1+2) | ವಾಚಿ (1+2) | ಹೃದಯೇ (1+5) |

| | | | |
|---|---|---|---|
| ಓಂ ರಾಂ ಆತ್ಮನೇ ನಮಃ | ಹೃದಯೇ (1 + 5) | ಪಾದಯೋಃ (1–5) | ವಾಚಿ (1 + 2) |
| '' ಯಂ ಅಂತರಾತ್ಮನೇ ನಮಃ | ನಾಭೌ $\frac{2-5}{1}$ | ಜಾನ್ವೋಃ (1–5) | ನಾಸಾ (1 + 4) |
| '' ಣಾಂ ಪರಮಾತ್ಮನೇ ನಮಃ | ಜಾನ್ವೋಃ (1–5) | ನಾಭೌ $\frac{2-5}{1}$ | ನೇತ್ರ (2 + 3) |
| '' ಯಂ ಜ್ಞಾನಾತ್ಮನೇ ನಮಃ | ಪಾದಯೋಃ (1–5) | ಹೃದಯೇ (1 + 5) | ಶಿರಸಿ (3) |

ಮೇಲೆ ಮೂರೂ ವಿಧಾನಗಳನ್ನು ತೋರಿಸಿದೆ. ಒಂದೊಂದೇ ನ್ಯಾಸ ಮಾಡಿಕೊಳ್ಳುವ ಪಕ್ಷದಲ್ಲಿ ಬ್ರಹ್ಮಚಾರಿಗಳು ಸೃಷ್ಟಿಕ್ರಮವನ್ನೂ, ಗೃಹಸ್ಥರು ಸ್ಥಿತಿಕ್ರಮವನ್ನೂ ಯತಿಗಳು ಲಯಕ್ರಮವನ್ನೂ ಮಾಡಿಕೊಳ್ಳಬೇಕು. ಮತ್ತು, ಮೊದಲನೆಯ ಎರಡು–ಮೂರು ತಿಂಗಳು (ಹೊಸದಾಗಿ ಉಪದೇಶವಾದರೆ) ಒಂದೊಂದೇ ನ್ಯಾಸ ಮಾಡಿಕೊಂಡರೇ ಸಾಕು. ಆಮೇಲೆ ಕ್ರಮವಾಗಿ ನಾಲ್ಕು ನ್ಯಾಸಗಳನ್ನು ಮಾಡಿಕೊಳ್ಳುವುದನ್ನು ಅಭ್ಯಾಸ ಮಾಡಿಕೊಳ್ಳುವುದು ಹೆಚ್ಚು ಶ್ರೇಯಸ್ಕರ. ನಾಲ್ಕು ನ್ಯಾಸಕ್ಕೆ –ನಮ್ಮ ಅನುಭವಕ್ಕೆ–ಎರಡು ನಿಮಿಷಗಳಿಗಿಂತ ಹೆಚ್ಚು ಹಿಡಿಯುವುದಿಲ್ಲ. ಹೀಗೇಕೆ ಬಲತ್ಕಾರ ಮಾಡುವಿರಿ? ಎಂದು ನೀವು ಕೇಳಬಹುದಲ್ಲವೆ! ಶ್ರೀಮದಾಚಾರ್ಯರು ತಂತ್ರಸಾರದಲ್ಲಿ (೪ ಅ. ೧೩೫ ಶ್ಲೋ) —

ಪ್ರತಿಮಾಯಾಮಾತ್ಮನಿ ಚ ನ್ಯಾಸೋऽಯಂ ಸನ್ನಿಧಾನಕೃತ್ ।

ಎಂದು ಹೇಳಿದ್ದಾರೆ. ಎಂದರೆ ಈ ರೀತಿ ನಾವು ಎಷ್ಟೆಷ್ಟು ನ್ಯಾಸ ಮಾಡಿಕೊಳ್ಳುತ್ತೇವೋ ಅಷ್ಟಷ್ಟು ಭಗವಂತನ ಸನ್ನಿಧಾನ ನಮ್ಮ ದೇಹದಲ್ಲಿ ಹೆಚ್ಚು ಹೆಚ್ಚು ಉಂಟಾಗುತ್ತದೆ. ಒಂದು ನ್ಯಾಸಕ್ಕಿಂತ ನಾಲ್ಕು ನ್ಯಾಸ ಮಾಡಿಕೊಂಡರ ಆ ಭಗವಂತನ– ವಿಶ್ವಾದಿ ಎಂಟು ಮೂರ್ತಿಗಳ ಸನ್ನಿಧಾನ ನಾಲ್ಕು ಪಟ್ಟು ಹೆಚ್ಚಾಗುತ್ತದೆ — ಎಲ್ಲಾ ಎರಡು ನಿಮಿಷದ ಕೆಲಸ. ಮೇಲಿನ ಅರ್ಧಶ್ಲೋಕದಲ್ಲಿ ''ಪ್ರತಿಮಾಯಾಂ'' — ಭಗವಂತನ ಅಥವಾ ರಮಾದಿ ದೇವತೆಗಳ ಪ್ರತಿಮೆಯಲ್ಲೂ, ಆತ್ಮನಿ ಚ ಮತ್ತು ತನ್ನ ದೇಹದಲ್ಲೂ ಈ ರೀತಿ ನ್ಯಾಸವು ಸನ್ನಿಧಾನಕೃತ್–ಸಾನ್ನಿಧ್ಯವನ್ನುಂಟು ಮಾಡುತ್ತದೆ — ಎಂದು ಹೇಳಿದರು.

**59. ಪ್ರತಿಮೆಗಳಲ್ಲೂ ಈ ನ್ಯಾಸ ಮಾಡಬಹುದು**: — ಆದರಿಂದ ನಾವು ಪೂಜೆ ಮಾಡುವ ರಾಮ, ಕೃಷ್ಣ, ವಿಠ್ಠಲ, ನರಸಿಂಹ–ವೆಂಕಟೇಶಾದಿ ಸಕಲ ಪ್ರತಿಮೆಗಳನ್ನೂ ಬಿಂಬಾವಾಹನೆ ಮಾಡಿದ ಬಳಿಕ ಈ ನಾರಾಯಣಾಷ್ಟಾಕ್ಷರ ಮಂತ್ರದ ವರ್ಣಗಳಿಂದಲೇ ಸೃಷ್ಟ್ಯಾದಿ ಕ್ರಮದಲ್ಲಿ ಒಂದು ನ್ಯಾಸವನ್ನೂ ಅಥವಾ

ನಾಲ್ಕೂ ನ್ಯಾಸಗಳನ್ನು ಮಾಡಬಹುದು. ಹಾಗೆ ಮಾಡಿದರೆ ಆ ಮೂರ್ತಿಯಲ್ಲಿ ಭಗವಂತನ ಸಾನ್ನಿಧ್ಯ ಹೆಚ್ಚಾಗುತ್ತದೆ. ನಮ್ಮ ದೇಹದಲ್ಲಿ ನ್ಯಾಸ ಮಾಡಿಕೊಳ್ಳುವುದನ್ನು ಅಭ್ಯಾಸ ಮಾಡಿಕೊಂಡರೆ ಮೂರ್ತಿಗಳಲ್ಲೂ ನ್ಯಾಸ ಮಾಡುವುದು ಸುಲಭವಾಗುತ್ತದೆ. ಆದರೆ ಮೂರ್ತಿಗಳಲ್ಲಿ ನ್ಯಾಸವನ್ನು ತುಳಸೀದಳದಿಂದಲೇ ಮಾಡಬೇಕು–ಬೆಟ್ಟುಗಳಿಂದ ಮಾಡಬಾರದು. ತುಳಸೀದಳ ಇಲ್ಲದಿದ್ದರೆ ತುಳಸೀಕಾಷ್ಠದಿಂದಲೂ ಮಾಡಬಹುದು. ಒಂದು ನ್ಯಾಸ ಮಾಡುವುದಕ್ಕಿಂತ ನಾಲ್ಕು ನ್ಯಾಸ ಮಾಡಿದರೆ ನಾಲ್ಕು ಪಟ್ಟು ಹೆಚ್ಚು ಸಾನ್ನಿಧ್ಯವಿರುತ್ತದೆ – ಆದರೆ ಎಲ್ಲವೂ ಎರಡೇ ನಿಮಿಷದ ಕೆಲಸ.

**60.** ಅಂಗುಲಿ ನ್ಯಾಸ: – ವರ್ಣನ್ಯಾಸಸ್ಥಾನಗಳನ್ನು ಹೇಳುವಾಗ ಪಜ್ಜಾನು–ನಾಭಿ– ಹೃದಯ –ವಾಜ್ನಾಸಾ–ನೇತ್ರ ಕೇಷು ಚ'' ಎಂದು ಎಂಟು ಅಂಗಗಳನ್ನು ಹೇಳಿದ ಬಳಿಕ 'ಚ'ಕಾರವನ್ನೂ ಸೇರಿಸಿದ್ದಾರೆ. ಇದರ ಅರ್ಥ ವರ್ಣನ್ಯಾಸವನ್ನು ಈ ಎಂಟು ಅಂಗಗಳಲ್ಲಿ ಮಾತ್ರವಲ್ಲದೆ ಎರಡು ಕೈಗಳ ಎಂಟು ಬೆಟ್ಟುಗಳಲ್ಲೂ ನ್ಯಾಸ ಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆಂದು ಛಲಾರೀ ವ್ಯಾಖ್ಯಾನಕಾರರು ತೋರಿಸುತ್ತಾರೆ ಮತ್ತು ಅದಕ್ಕೆ ಪ್ರಮಾಣವನ್ನೂ ತೋರಿಸುತ್ತಾರೆ – ''ಚ–ಶಬ್ದಾತ್ ಕರಾಂಗುಲೀಷು ಚ ಅಷ್ಟಾಕ್ಷರಾಣಾಂ ನ್ಯಾಸೋ ಜ್ಞೇಯಃ'' – ಇದನ್ನೇ ಅಂಗುಲಿನ್ಯಾಸ ಎನ್ನುತ್ತಾರೆ. ಇದೂ ಸಹ ಸೃಷ್ಟ್ಯಾದಿ ಕ್ರಮಗಳಿಂದ ಮೂರು ವಿಧವಾಗಿದೆ. ಒಂದೊಂದನ್ನಾಗಲಿ ನಾಲ್ಕನ್ನಾಗಲಿ ತಮ್ಮ ತಮ್ಮ ಆಶ್ರಮಕ್ಕೆ ತಕ್ಕಂತೆ ಮಾಡಿಕೊಳ್ಳಬಹುದು. ಕೆಳಗೆ ಮೂರೂ ಕ್ರಮಗಳನ್ನು ತೋರಿಸಿದೆ (ಹೆಬ್ಬೆಟ್ಟಿನಿಂದ ಈ ಬೆಟ್ಟುಗಳನ್ನು ಮುಟ್ಟುತ್ತಾ ಮಂತ್ರ ಪಠಿಸಬೇಕು)

| ಮಂತ್ರ | ಸೃಷ್ಟಿ | ಸ್ಥಿತಿ | ಲಯ |
|---|---|---|---|
| ಓಂ ಓಂ ವಿಶ್ವಾಯ ನಮಃ | ಬಲಗೈ ತರ್ಜನೀ | ಬಲಗೈ ತರ್ಜನೀ | ಎಡಗೈ ತರ್ಜನೀ |
| ಓಂ ನಂ ತೈಜಸಾಯ ನಮಃ | '' ಮಧ್ಯಮಾ | '' ಮಧ್ಯಮಾ | '' ಮಧ್ಯಮಾ |
| ಓಂ ಮೋಂ ಪ್ರಾಜ್ಞಾಯ ನಮಃ | '' ಅನಾಮಿಕಾ | '' ಅನಾಮಿಕಾ | '' ಅನಾಮಿಕಾ |
| ಓಂ ನಾಂ ತುರ್ಯಾಯ ನಮಃ | '' ಕನಿಷ್ಠಿಕಾ | ಎಡಗೈಕನಿಷ್ಠಿಕಾ | '' ಕನಿಷ್ಠಿಕಾ |
| ಓಂ ರಾಂ ಆತ್ಮನೇ ನಮಃ | ಎಡಗೈ '' | '' ತರ್ಜನೀ | ಬಲಗೈ '' |
| ಓಂ ಯಂ ಅಂತರಾತ್ಮನೇ ನಮಃ | '' ಅನಾಮಿಕಾ | '' ಮಧ್ಯಮಾ | '' ಅನಾಮಿಕಾ |
| ಓಂ ಣಾಂ ಪರಮಾತ್ಮನೇ ನಮಃ | '' ಮಧ್ಯಮಾ | '' ಅನಾಮಿಕಾ | '' ಮಧ್ಯಮಾ |
| ಓಂ ಯಂ ಜ್ಞಾನಾತ್ಮನೇ ನಮಃ | '' ತರ್ಜನೀ | '' ಕನಿಷ್ಠಿಕಾ | '' ತರ್ಜನೀ |

ಸೂಚನೆ : ಹೆಬ್ಬೆಟ್ಟುಗಳಿಂದ ಈ ಬೆಟ್ಟುಗಳನ್ನು ಕೆಳಗಿನಿಂದ ಮೇಲಿನವರೆಗೆ ಸ್ಪರ್ಶ ಮಾಡಿಕೊಳ್ಳಬೇಕು.

**61. ಋಷ್ಯಾದಿ ನ್ಯಾಸ:** — ಅಂಗುಲಿ ನ್ಯಾಸವಾದ ಬಳಿಕ ಋಷ್ಯಾದಿ ನ್ಯಾಸ ಮಾಡಿಕೊಳ್ಳಬೇಕು. ಪ್ರಣವ ಮಂತ್ರಕ್ಕೆ ಹೇಳುವಾಗಲೇ ಈ ಮಂತ್ರಕ್ಕೂ ಋಷ್ಯಾದಿಗಳನ್ನು — ಎರಡಕ್ಕೂ ಒಂದೇ ಆದ್ದರಿಂದ — ಒಟ್ಟಿಗೆ ಹೇಳಿದ್ದಾರೆ (ತಂತ್ರಸಾರ ೧೫. ೧೭ ಶ್ಲೋ) —

ಋಷಿಶ್ಚ ದೇವತ್ವೈಕೋಽಹಂ ತಾರಾದೀನಾಂ ವಿಶೇಷತಃ ।
ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ ಮತಾ ॥

ಇದರ ಅರ್ಥ ಪ್ರಣವ ಮಂತ್ರದಲ್ಲೇ ಹೇಳಿದೆ (ಖಂಡ 44 ನೋಡಿ). ಆದರಂತೆ ನಾರಾಯಣಾಷ್ಟಾಕ್ಷರದ ಋಷ್ಯಾದಿಗಳನ್ನು ಹೀಗೆ ಮಾಡಿಕೊಳ್ಳಬೇಕು — ಅಸ್ಯ ಶ್ರೀನಾರಾಯಣಾಷ್ಟಾಕ್ಷರ ಮಹಾಮಂತ್ರಸ್ಯ ಅಂತರ್ಯಾಮೀ ಋಷಿಃ (ಶಿರಸಿ) । ದೇವೀ ಗಾಯತ್ರೀ ಛಂದಃ (ಮುಖೇ)। ಮ.ಭಾ.ಮು. ಶ್ರೀಲಕ್ಷ್ಮೀನಾರಾಯಣೋ ದೇವತಾ (ಹೃದಯೇ) । (ಜಪಾರಂಭ ಮಾಡುವಾಗ) ಯಥಾಶಕ್ತಿ ಜಪೇ ವಿನಿಯೋಗಃ। (ಜಪ ಮುಗಿಸುವಾಗ) ಯಥಾ ಶಕ್ತಿ ಜಪೋಪಸಂಹಾರೇ ವಿನಿಯೋಗಃ ॥

ಸೂಚನೆ — ಅನೇಕರು 'ಲಕ್ಷ್ಮೀ' ಎಂದು ಹೇಳುವುದಿಲ್ಲ; ಮ.ಭಾ.ಮು. ಎಂದೂ ಹೇಳುವುದಿಲ್ಲ; ಸುಮ್ಮನೆ ನಾರಾಯಣೋ ದೇವತಾ ಎಂದು ಹೇಳುತ್ತಾರೆ. ಅದು ಶಿಷ್ಟ ಸಂಪ್ರದಾಯವಲ್ಲ. ಅಥವಾ ಅಷ್ಟೆಲ್ಲಾ ಬರೆಯಲು ಸೋಮಾರಿತನ ಮಾಡಿಕೊಂಡು ಬರೆಯದೆ ಬಿಟ್ಟಿದ್ದರೂ ಇರಬಹುದು. ಸಕಲ ವಾಙ್ಮನೋದೇವತೆಯೂ ಭಾಗ್ಯ ದೇವತೆಯೂ ಆದ ಲಕ್ಷ್ಮೀದೇವಿಯ ಹೆಸರನ್ನು ನಾರಾಯಣನ ಜೊತೆಯೇ ಸೇರಿಸಿ ಹೇಳುವುದು — ಭಗವದುಪಸರ್ಜನತಯಾ ಹೇಳುವುದು — ಶಿಷ್ಟ ಸಂಪ್ರದಾಯವೆಂದು ಶ್ರೀಮಟ್ಟೀಕಾಕೃತ್ಪಾದರೇ 'ಶ್ರಿಯಃ ಪತ್ಯೇ' ಇತ್ಯಾದಿ ಅನೇಕ ಪ್ರಯೋಗಗಳಿಂದ ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ. ಅದಲ್ಲದೆ ಭಾರತೀರಮಣ ಮುಖ್ಯಪ್ರಾಣ ಎಂದು ಸೇರಿಸದಿದ್ದರೆ ಅದನ್ನು ಭಗವಂತ ಶ್ರೀಮನ್ನಾರಾಯಣನೇ ಸ್ವೀಕರಿಸುವುದಿಲ್ಲ ಎಂದು ಹಿಂದೆಯೇ ವಿಸ್ತಾರವಾಗಿ (ಖಂಡ ೪೭ ರಲ್ಲಿ) ನಿರೂಪಣೆ ಮಾಡಿದ್ದೇವೆ. ಆದ್ದರಿಂದ ತಪ್ಪದೆ 'ಮ.ಭಾ.ಮು ಶ್ರೀಲಕ್ಷ್ಮೀನಾರಾಯಣ' ಎಂದೇ ಉಚ್ಚರಿಸಬೇಕೆಂದು ನಾವು ಆಗ್ರಹಪೂರ್ವಕ ಹೇಳುತ್ತೇವೆ. ಇದು ಅಷ್ಟಮಹಾಮಂತ್ರಗಳಿಗೂ ಅನ್ವಯಿಸುತ್ತದೆ.

**62. ಧ್ಯಾನ ಶ್ಲೋಕಗಳು:** — ಪ್ರಣವ ಮಂತ್ರಕ್ಕೆ ಹೇಳಿದ 'ಉದ್ಯದ್ ಭಾಸ್ವತ್' ಎಂಬ ಮೂರುವರೆ ಶ್ಲೋಕಗಳೇ ನಾರಾಯಣಾಷ್ಟಾಕ್ಷರ ಮಂತ್ರಕ್ಕೂ

ಧ್ಯಾನ ಶ್ಲೋಕಗಳು. ಆದ್ದರಿಂದ ಅದನ್ನು ಹೇಳಬೇಕಾಗಿಲ್ಲ. ಅದರ ಅರ್ಥವನ್ನೂ (ಖಂಡ 45)ರಲ್ಲಿ ಹೇಳಿರುವುದರಿಂದ ಅಲ್ಲೇ ನೋಡಿಕೊಳ್ಳಬೇಕು.

**63. ಜಪ ಸಂಖ್ಯೆ**: — ಸದಾಚಾರಸ್ಮೃತಿಯಲ್ಲಿ ಗಾಯತ್ರೀ ಮಂತ್ರ ಜಪ ಎಷ್ಟು ಮಾಡುತ್ತೇವೋ ಆದರ ಮೂರರಷ್ಟು (ಮೂರು ಪಟ್ಟು) ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸಬೇಕೆಂದು ಹೇಳಿದೆ (ಶ್ಲೋ. ೧೯) —

ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್

ಗಾಯತ್ರಿಯ ತ್ರಿಪಾದಗಳು ನಾರಾಯಣಾಷ್ಟಾಕ್ಷರ ಮಂತ್ರವು ಮೂರಾವರ್ತಿ ಆವೃತ್ತಿಯಾದ್ದರಿಂದ ಉದ್ಭಿನ್ನವಾದುವೆಂದು ತಂತ್ರಸಾರದಲ್ಲಿ (೧ ಅ. ೧೪ ಶ್ಲೋ.) ಹೇಳಿದೆ. ಈ ವಿಚಾರವನ್ನು ಮುಂದೆ ಬ್ರಹ್ಮಗಾಯತ್ರೀ ಮಂತ್ರದಲ್ಲಿ ವಿಸ್ತರಿಸುವೆವು, ಆದ್ದರಿಂದ ಸಂಧ್ಯಾ ಗಾಯತ್ರೀ ಸಿದ್ಧಿಗಾಗಿ ನಾರಾಯಣಾಷ್ಟಾಕ್ಷರ ಮಂತ್ರವನ್ನು ಗಾಯತ್ರಿಯ ಮೂರರಷ್ಟು ಹೇಳಿಕೊಳ್ಳಬೇಕು. ಇದು ಕನಿಷ್ಠಪಕ್ಷವಾಯಿತು. ಅದಕ್ಕೂ ಹೆಚ್ಚಾಗಿಯೂ ಸ್ವತಂತ್ರವಾಗಿಯೂ ಸಾವಿರ, ಮೂರು ಸಾವಿರವನ್ನೂ ಯಥಾಶಕ್ತಿ ಮಾಡಬಹುದು.

**64. ಜಪಾರ್ಘ್ಯ**: — ಜಪ ಮುಗಿದ ಮೇಲೆ ಹಿಂದಿನಂತೆಯೇ ಪ್ರಾಣಾಯಾಮ ಅಂಗನ್ಯಾಸ — ಕರನ್ಯಾಸ, ವರ್ಣನ್ಯಾಸ, ಅಂಗುಲಿನ್ಯಾಸ, ಋಷ್ಯಾದಿ ನ್ಯಾಸ ಧ್ಯಾನ ಶ್ಲೋಕಗಳನ್ನೂ ಹೇಳಿಕೊಂಡು ''ಅನೇನ ನಾರಾಯಣಾಷ್ಟಾಕ್ಷರ ಮಂತ್ರ ಜಪೇನ ಭಗವಾನ್ ಮ.ಭಾ.ಮು. ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್। ಸುಪ್ರೀತೋ ವರದೋ ಭವತು, ಶ್ರೀಕೃಷ್ಣಾರ್ಪಣಮಸ್ತು' ಎಂದು ಹೇಳಿ ನೀರು ಬಿಟ್ಟು ಜಪೋಪ. ಸಂಹಾರ ಮಾಡಬೇಕು, ಆಮೇಲೆ ನೀರನ್ನು ನಾರಾಯಣಾಷ್ಟಾಕ್ಷರ ಮಂತ್ರದಿಂದಲೇ (ಮೂರಾವರ್ತಿ ಅಥವಾ ಆರಾವರ್ತಿ). ಅಭಿಮಂತ್ರಿಸಿ ಆ ನೀರಿನಿಂದ, ಮೂಲ ಮಂತ್ರ ಹೇಳಿ 'ಮ.ಭಾ.ಮು. ಶ್ರೀಲಕ್ಷ್ಮೀನಾರಾಯಣಂ ತರ್ಪಯಾಮಿ' ಎಂದು ಹೇಳುತ್ತಾ ಮೂರು ಅರ್ಘ್ಯವನ್ನು ಅಥವಾ ಹೆಚ್ಚು ಜಪ ಮಾಡಿದ್ದರೆ ಸಾವಿರಕ್ಕೆ ಒಂದರಂತೆ ಅರ್ಘ್ಯ ಕೊಡಬೇಕು.

ಇಲ್ಲಿಗೆ ನಾರಾಯಣಾಷ್ಟಾಕ್ಷರ ಮಂತ್ರದ ಪೀಠಿಕೆ ಮುಗಿಯಿತು.



# 3. ಅಷ್ಟಾಕ್ಷರ ವ್ಯಾಹೃತಿಮಂತ್ರದ ಪೀಠಿಕೆ

65. ಮಂತ್ರೋದ್ಧಾರ— ತಂತ್ರಸಾರದಲ್ಲಿ ಒಂದನೇ ಅಧ್ಯಾಯದಲ್ಲಿ ಹನ್ನೊಂದನೇ ಶ್ಲೋಕದಲ್ಲಿ ಈ ವಾಕ್ಯದಿಂದ ವ್ಯಾಹೃತಿಮಂತ್ರವನ್ನು ಉದ್ಧರಿಸಿದ್ದಾರೆ—

ಆದ್ಯೈಃಸ್ತಾರ ಚತುರ್ವರ್ಣೈರ್ ಭಿನ್ನಾವ್ಯಾಹೃತಯಃ ಕ್ರಮಾತ್॥

ಇದರ ಅರ್ಥ— ಆದ್ಯೈಃ—ಪ್ರಾರಂಭದ ಅಥವಾ ಮೊದಲಿನ, ತಾರಚತುರ್ವರ್ಣೈಃ— ತಾರ–ಓಂಕಾರದ, ಚತುರ್ವರ್ಣೈಃ — ನಾಲ್ಕು ಅಕ್ಷರಗಳಿಂದ, ವ್ಯಾಹೃತಯಃ— ಭೂಃ, ಭುವಃ, ಸುವಃ (ಅಥವಾ ಸ್ವಃ) ಮತ್ತು ಭೂರ್ಭುವಸ್ಸುವಃ ಎಂಬ ನಾಲ್ಕು ವ್ಯಾಹೃತಿಮಂತ್ರಗಳು, ಕ್ರಮಾತ್ — ಕ್ರಮವಾಗಿ ಭಿನ್ನಾಃ— ಹೊರಟವು (ಒಡೆದುಕೊಂಡು ಹೊರಟವು ಅಥವಾ ಅಭಿವ್ಯಕ್ತವಾದುವು ಎಂದರ್ಥ).

ತಾತ್ಪರ್ಯ: —ಪ್ರಣವಾಕ್ಷರದಲ್ಲಿರುವ ಎಂಟು ವರ್ಣಗಳ ಪೈಕಿ ಪ್ರಾರಂಭದ ನಾಲ್ಕು ವರ್ಣಗಳು ಎಂದರೆ, ೧. ಅಕಾರ, ೨. ಉಕಾರ, ೩.ಮಕಾರ ಮತ್ತು ೪. ನಾದ ಎಂಬುವು— ಇವುಗಳಿಂದ ಕ್ರಮವಾಗಿ ನಾಲ್ಕು ವ್ಯಾಹೃತಿಗಳು ಒಡೆದುಕೊಂಡು ಹೊರಟವು. 'ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ' ಎಂದು ತೈತ್ತಿರೀಯೋಪನಿಷತ್ತು ಹೇಳುವುದು ಪ್ರಸಿದ್ಧವಾಗಿರುವುದರಿಂದ ತಂತ್ರಸಾರದಲ್ಲಿ ವ್ಯಾಹೃತಿಗಳನ್ನು ಸ್ಪಷ್ಟವಾಗಿ ಹೇಳಲಿಲ್ಲ. ಅಂತೂ ಪ್ರಣವದ ಅಕಾರದಿಂದ ಭೂಃ ಎಂಬ ವ್ಯಾಹೃತಿಯೂ, ಉಕಾರದಿಂದ ಭುವಃ ಎಂಬ ವ್ಯಾಹೃತಿಯೂ ಮಕಾರದಿಂದ ಸ್ವಃ (ಅಥವಾ ಸುವಃ) ಎಂಬ ವ್ಯಾಹೃತಿಯೂ, ನಾದ ಎಂಬ ವರ್ಣದಿಂದ (ಮೂರು ವ್ಯಾಹೃತಿಗಳೂ ಸೇರಿದ) ಭೂರ್ಭುವಸ್ಸುವಃ ಎಂಬ ವ್ಯಾಹೃತಿಯೂ ಅಭಿವ್ಯಕ್ತವಾದುವು ಎಂಬುದೇ ತಂತ್ರಸಾರದ ವಾಕ್ಯದ ಒಟ್ಟು ಭಾವಾರ್ಥ.

**ಸೂಚನೆ** — ಪ್ರಣವಮಂತ್ರಕ್ಕೆ ಅಂಗನ್ಯಾಸ ಹೇಳುವಾಗ ತಂತ್ರಸಾರದಲ್ಲೇ (೧ ಅ. ೩೧ ಶ್ಲೋ) 'ಸಮಾಸವ್ಯಾಸಯೋಗೇನ ವ್ಯಾಹೃತೀನಾಂ ಚತುಷ್ಟಯಮ್' ಎಂದು ಹೇಳಿರುವುದರಿಂದ ಬಿಡಿಬಿಡಿಯಾದ (ವ್ಯಾಸ) ವ್ಯಾಹೃತಿಗಳನ್ನೇ ಕೂಡಿಸಿದರೆ (ಸಮಾಸ) ನಾಲ್ಕನೆಯ ವ್ಯಾಹೃತಿಯಾಗವುದೆಂಬ ಯುಕ್ತಿಯನ್ನು (ಯೋಗ) ತೋರಿಸಿದ್ದಾರೆ. ಆದರೆ ಉಡುಪಿಯ ಆಹ್ನಿಕಮಂಜರಿಯಲ್ಲಿ ಮಾತ್ರ 'ಭೂರ್ಭುವಃ ಸ್ವಃ' ಎಂದು ಮೂರೇ ವ್ಯಾಹೃತಿಯ ಜಪ ಹೇಳಿದ್ದಾರೆ. ಇದು ಮುಂದೆ (ಶ್ಲೋ. ೩೮) 'ಚತಸ್ರೋ ವ್ಯಾಹೃತೀರ್ನ್ಯಸೇತ್' ಎಂಬುದಕ್ಕೂ 'ಆದ್ಯೈಸ್ತಾರಚತುರ್ವರ್ಣೈಃ' ಎಂಬುದಕ್ಕೂ 'ಅನಿರುದ್ಧಾದಿಕಾಸ್ತಾಸಾಂ ದೇವತಾ ವ್ಯುತ್ಕ್ರಮೇಣ ವಾ' (ಶ್ಲೋ

೧೨) ಎಂಬುದಕ್ಕೂ ವಿರೋಧವೂ ಆಗುತ್ತದೆ – ಹೊ ೦ಕೆಯೂ ಆಗುವುದಿಲ್ಲ. ಆದ್ದರಿಂದ ನಾಲ್ಕು ವ್ಯಾಹೃತಿಗಳನ್ನೇ ಗ್ರಹಣಮಾಡಬೇಕು

**66. ವ್ಯಾಹೃತಿಶಬ್ದಾರ್ಥ** – ತೈತ್ತಿರಿಯೋಪನಿಷದ್‌ಭಾಷ್ಯದಲ್ಲಿ (೧ವಲ್ಲಿ ೧೪ ಅನುವಾಕ) 'ವ್ಯಾಹೃತಿ' ಶಬ್ದದ ಅರ್ಥವನ್ನು ಹೀಗೆ ಹೇಳಿದ್ದಾರೆ –

**ಸಮ್ಯಕ್ ವ್ಯಾಹರಣಾದ್ ವಿಷ್ಣೋಃ ಶ್ರುತಾ ವ್ಯಾಹೃತಯಸ್ತ್ವಿತಿ||**

ಅರ್ಥ– ವಿಷ್ಣೋಃ–ವಿಷ್ಣುವಿನ ಗುಣಗಳನ್ನು, ಸಮ್ಯಕ್–ಚೆನ್ನಾಗಿ (ಸ್ಪಷ್ಟವಾಗಿ), ವ್ಯಾಹರಣಾತ್ – ಹೇಳುವುದರಿಂದ, ವ್ಯಾಹೃತಯಃ ತು ಇತಿ– ವ್ಯಾಹೃತಿಗಳೆಂದು, ಶ್ರುತಾಃ ಈ ನಾಲ್ಕೂ ಹೇಳಲ್ಪಡುತ್ತವೆ.

ವಿವರಣೆ –ವ್ಯಾಹೃತಿ ಎಂಬುದನ್ನು ಬಿಡಿಸಿದರೆ – ವಿ + ಆ + ಹೃ(ಧಾತು) + ತಿ (ಪ್ರತ್ಯಯ) ಎಂದಾಗುತ್ತದೆ. ವಿ–ವಿಶೇಷವಾಗಿ, ಆ–ಹೃ–ಹೇಳುವುದು, ತಿ –ನಾಮವಾಚಕ ಕೃದಂತ ಪ್ರತ್ಯಯ (ಭಕ್ತಿ, ಶಕ್ತಿ, ಮತಿ, ಇತ್ಯಾದಿಗಳಲ್ಲಿರುವಂತೆ). ಈ ನಾಲ್ಕು ವ್ಯಾಹೃತಿಗಳೂ ವಿಷ್ಣುವಿನ ಸಕಲ ಗುಣಗಳನ್ನೂ ಸಂಗ್ರಹಿಸಿ ಹೇಳುವುದರಿಂದ ಇವಕ್ಕೆ 'ವ್ಯಾಹೃತಿ'ಗಳೆಂಬ ಹೆಸರು ಬಂದಿದೆ– ಎಂದರ್ಥ

ಇದೇ ರೀತಿ ಅದೇ ತೈತ್ತಿರೀಯ ಭಾಷ್ಯದಲ್ಲೇ –

**ಸರ್ವವೇದೋಕ್ತಸರ್ವಸ್ವ–ವ್ಯಾಹೃತೇರ್ ವ್ಯಾಹೃತಿತ್ವಮು**

ಎಂದು ಹೇಳಿದ್ದಾರೆ. ಆದಕ್ಕೆ –ಸಕಲ ವೇದಗಳಲ್ಲಿಯೂ (ಋಗ್, ಯಜುರ್, ಸಾಮ ಎಂಬ ಮೂರು ವೇದಗಳಲ್ಲೂ) ಹೇಳಿದ ಎಲ್ಲಾ ಅರ್ಥಗಳನ್ನು ಸಂಗ್ರಹಿಸಿ ಹೇಳುವುದರಿಂದಲೂ ಇವಕ್ಕೆ 'ವ್ಯಾಹೃತಿ'ಗಳೆಂಬ ಹೆಸರು ಬಂದಿದೆ ಎಂದು 'ವ್ಯಾಹೃತಿಸಾರ' ಎಂಬ ಗ್ರಂಥದಲ್ಲಿ ಹೇಳಿದೆ. (ವಿ – ಚೆನ್ನಾಗಿ, ಆ–ಹೃ – ಹೇಳು) ಛಾಂದೋಗ್ಯ ಉಪನಿಷತ್ತಿನಲ್ಲಿ ಭೂಃ ಎಂಬುದು ಋಗ್ವೇದದ ಸಾರವೆಂದೂ, ಭುವಃ ಎಂಬುದು ಯಜುರ್ವೇದದ ಸಾರವೆಂದೂ, ಸ್ವಃ ಎಂಬುದು ಸಾಮವೇದದ ಸಾರವೆಂದೂ ಹೇಳಿದೆ. (೨ನೇ ಅಧ್ಯಾಯ, ೨೩ನೇ ಖಂಡ)

**67. ವ್ಯಾಹೃತಿಗಳ ಅರ್ಥ** – ಋಗ್ಭಾಷ್ಯದಲ್ಲಿ ಮೂರು ವ್ಯಾಹೃತಿಗಳಿಗೆ ಅರ್ಥವನ್ನು ಹೀಗೆ ಸಂಕ್ಷೇಪವಾಗಿ ಹೇಳಿದ್ದಾರೆ –

**ಪೂರ್ಣೋ ಭೂವರೋऽನಂತ – ಸುಖೋ ಯದ್ ವ್ಯಾಹೃತೀರಿತಃ ||**

ವಿವರಣೆ ( ಅ) ಭೂಃ ಶಬ್ದದ ಅರ್ಥವನ್ನು 'ಪೂರ್ಣಃ' ಎಂದು ಹೇಳಿದ್ದಾರೆ. ಇದರ ವಿವರಣೆಯನ್ನು 'ಋಗ್ಭಾಷ್ಯಟೀಕಾ'ದಲ್ಲಿ ಟೀಕಾರಾಯರು ಹೀಗೆ ತೋರಿಸಿದ್ದಾರೆ– 'ಭೂ ಬಹೌ' ಎಂದು ಧಾತುವಿದೆ, 'ಬಹುಃ ಪೂರ್ಣತಾಯಾಮ್' ಎಂದು ಬಹು ಶಬ್ದದ ಅರ್ಥವೆಂದು ತೋರಿಸಿದ್ದಾರೆ. ೦ತೆ ಬಹು 'ಪೂರ್ಣ' ಎಂದು ಅರ್ಥವುಳ್ಳ ಭೂ ಧಾತುವಿನ ಮೇಲೆ ಕ್ವಿಪ್

ಎಂಬ ಪ್ರತ್ಯಯ ಬಂದು ಭೂ + ಕ್ವಿಪ್ ಎಂದಿರಲು, ಮುಂದೆ 'ವೇರಪೃಕ್ತಸ್ಯ' (ಪಾ ೬/೧/೬೭) ಎಂಬ ಸೂತ್ರದಂತೆ ಕ್ವಿಪ್ ಪ್ರತ್ಯಯದ ಎಲ್ಲ ಭಾಗವೂ ಲೋಪವಾಗಿ ಹೋಗುವುದರಿಂದ ಭೂಃ ಎಂದು ಆಗುತ್ತದೆ. ಹೀಗೆ ಭೂಃ ಎಂದರೆ ಪೂರ್ಣನಾದವನು (ಗುಣಗಳಿಂದ ಪರಿಪೂರ್ಣನಾದವನು, ಬ್ರಹ್ಮಾಂಡದ ಒಳಗೆ ಹೊರಗೆ ಎಲ್ಲಾ ಕಡೆ ವ್ಯಾಪ್ತನಾಗಿ ತುಂಬಿಕೊಂಡಿರುವವನು ಮತ್ತು ಕಾಲತ್ರಯದಲ್ಲೂ ಪೂರ್ಣವಾಗಿರುವವನು) ಇತ್ಯಾದಿ ರೀತಿಯಾಗಿ ಅನೇಕ ಪ್ರಕಾರ ಅರ್ಥವಾಗುತ್ತದೆ.

(ಆ) ಭುವಃ ಎಂಬ ವ್ಯಾಹೃತಿಯ ಅರ್ಥವನ್ನು 'ಭೂತಿವರಃ' ಎಂದು ತೋರಿಸಿದ್ದಾರೆ. 'ಭೂ ಸತ್ತಾಯಾಮ್' ಎಂದು ಧಾತುಪಾಠವಿರುವುದರಿಂದ ಭೂ ಧಾತುವಿಗೆ ಆಗು 'ಇರು' ಎಂದು ಅರ್ಥ. ಅದಕ್ಕೆ ಕ್ತಿನ್(ಅಥವಾ ತಿ) ಪ್ರತ್ಯಯ ಸೇರಿ 'ಭೂತಿ' ಎಂದಾಗುತ್ತದೆ. 'ವಿಭೂತಿರ್ ಭೂತಿರ್ಶ್ವರ್ಯಂ' ಎಂದು ಅಮರವಿರುವುದರಿಂದ. ಭೂತಿಃ ಎಂದರೆ ಐಶ್ವರ್ಯ ಎಂದರ್ಥ. ಭೂತ್ಯಾ ವರಃ ಶ್ರೇಷ್ಠಃ– ಭೂತಿವರಃ ಐಶ್ವರ್ಯದಿಂದ ಎಲ್ಲರಿಗಿಂತಲೂ ಶ್ರೇಷ್ಠ ಎಂಬುದನ್ನು ಭೂತಿವರಃ ಎಂಬ ಪದ ತೋರಿಸುತ್ತದೆ. ನಿರುಕ್ತ ನಿಯಮದಂತೆ ಭೂತಿ + ವರಃ ಎಂಬುದು ಸೇರಿಕೊಂಡಾಗ 'ಭೂತಿ' ಶಬ್ದದ ಕಡೆಯ ಅಕ್ಷರವೂ, 'ವರ' ಶಬ್ದದ ಕಡೆಯ ಅಕ್ಷರವೂ ಲೋಪವಾಗುವುದಲ್ಲದೆ ಭೂ ಎಂಬಲ್ಲಿರುವ ದೀರ್ಘಸ್ವರವು ಹ್ರಸ್ವವಾಗಿ ಭುವಃ ಎಂದಾಗುತ್ತದೆ. ಆದ್ದರಿಂದ ಇದಕ್ಕೆ 'ಐಶ್ವರ್ಯದಿಂದ ಎಲ್ಲರಿಗಿಂತಲೂ ಶ್ರೇಷ್ಠನಾದವನು, ಭಾಗ್ಯ ದೇವತೆ ಎನಿಸಿದ ಶ್ರೀ ಲಕ್ಷ್ಮೀದೇವಿಯ' ಐಶ್ವರ್ಯಕ್ಕೆ ಕಾರಣೀಭೂತನಾದ 'ಮಹಾ ಐಶ್ವರ್ಯವಂತ' ಎಂದರ್ಥ. ಇದೇ ಭುವಃ ಶಬ್ದಾರ್ಥ.

(ಇ) ಸ್ವಃ ಎಂಬ ವ್ಯಾಹೃತಿಯ ಅರ್ಥವನ್ನು 'ಅನಂತಸುಖಃ' ಎಂದು ಹೇಳಿದ್ದಾರೆ. ಸ್ವಃ ಅಥವಾ ಸುವಃ ಎಂಬಲ್ಲಿ ಸು + ವಃ ಎಂದು ಎರಡು ಅವಯವಗಳಿವೆ. ವಕಾರಕ್ಕೆ ಸುಖ ಎಂದರ್ಥವೆಂದು ಒಂದು ಏಕಾಕ್ಷರಕೋಶದಲ್ಲಿ ಹೇಳಿದೆ. ಸು ಎಂದರೆ ಸಮೀಚಿನ ಅಥವಾ ಉತ್ತಮವಾದ ಎಂದರ್ಥ. 'ಅನಂತತ್ವ' ವೇ (ಕೊನೆಯಿಲ್ಲದಂತೆ ಅಪಾರವಾಗಿರುವುದೇ) 'ಸಮೀಚೀನತ್ವ' ಎಂದು ಟೀಕಾರಾಯರು ತೋರಿಸುತ್ತಾರೆ. ಹೀಗೆ ಸು–ಸಮೀಚೀನವಾದ ಎಂದರೆ ಅನಂತವಾದ (ಎಣೆಯಿಲ್ಲದ), ವ–ಸುಖವುಳ್ಳವನೇ ಸುವಃ ಎಂದು ಪ್ರಸಿದ್ಧನಾಗಿದ್ದಾನೆ. ನಿರುಕ್ತನಿಯಮದಂತೆ ಸು + ವಃ ಸೇರಿದಾಗ ಮಧ್ಯದ ಉಕಾರವು ವಿಕಲ್ಪದಿಂದ ಲೋಪವಾಗುವುದರಿಂದ ಸ್ವಃ ಎಂದೂ ಸುವಃ ಎಂದೂ ಎರಡು ರೂಪವಾಗುತ್ತದೆ ಎಂದು ಟೀಕಾದಲ್ಲಿ ತೋರಿಸಿದ್ದಾರೆ. 'ಸ್ವರವ್ಯಯಂ ಸ್ವರ್ಗ–ನಾಕ–' ಎಂದು ಅಮರಕೋಶ ಹೇಳುವಂತೆ ಸ್ವಃ ಎಂಬುದು ಸ್ವಾಭಾವಿಕವಾಗಿಯೇ ಅವ್ಯಯವಾಗಿದೆ. ಏವಂ ಚ ಆ ವಿಷ್ಣುವಿಗೆ ಭುವಃ ಎಂಬ

ವ್ಯಾಹೃತಿಯಂತೆ ಅಪಾರ ಐಶ್ವರ್ಯವಿರುವುದು ಮಾತ್ರ ವಿಶೇಷವಲ್ಲ, ಆ ಅನಂತ ಐಶ್ವರ್ಯವನ್ನು ನಿತ್ಯದಲ್ಲೂ ಅನುಭೋಗಿಸುತ್ತಾ ಸದಾ ಆನಂದಮಯನಾಗಿರುವುದೂ ಮತ್ತೊಂದು ವಿಶೇಷ ಎಂಬುದನ್ನು ಈ ಸುವಃ ಅಥವಾ ಸ್ವಃ ಎಂಬ ವ್ಯಾಹೃತಿ ಹೇಳುತ್ತದೆ.

ಈ ವ್ಯಾಹೃತಿಗಳ ಬೇರೆ ಬೇರೆ ಅರ್ಥಗಳನ್ನು ತೈತ್ತಿರೀಯೋಪನಿಷದ್‌ಭಾಷ್ಯದಲ್ಲೂ ಅನುವ್ಯಾಖ್ಯಾನದಲ್ಲೂ ಹೇಳಿದ್ದಾರೆ. ಅದನ್ನೆಲ್ಲಾ 'ನಖಸ್ತುತಿ' ವಿವರಣೆಯಲ್ಲಿ ತೋರಿಸಿದೆ, ಅಲ್ಲಿ ನೋಡಿಕೊಳ್ಳಿ.

**68. ವ್ಯಾಹೃತಿಗಳ ಮಹತ್ವ** — ತೈತ್ತಿರೀಯೋಪನಿಷದ್ಭಾಷ್ಯದಲ್ಲಿ ಉದಹರಿಸಿದ 'ವ್ಯಾಹೃತಿಸಾರ' ಎಂಬ ಗ್ರಂಥದ ಈ ವಾಕ್ಯವು ವ್ಯಾಹೃತಿಗಳ ಮಹತ್ತ್ವವನ್ನು ಎತ್ತಿ ಹೇಳುತ್ತದೆ.

**ಪ್ರಣವಾರ್ಥಾ ವ್ಯಾಹೃತಯೋ ವ್ಯಾಹೃತ್ಯರ್ಥಾ ಋಗಾದಯಃ ।**
**ಇತಿಹಾಸಪುರಾಣಂ ಚ ಪಂಚರಾತ್ರಂ ಚ ಸರ್ವಶಃ ॥**

(ಅರ್ಥ) ಪ್ರಣವದ (ಓಂಕಾರದ) ಅರ್ಥವೇ ವ್ಯಾಹೃತಿಗಳು. ಆ ವ್ಯಾಹೃತಿಗಳ ಅರ್ಥವೇ (ವಿವರಣೆಯೇ) ಋಗಾದಿ ವೇದಗಳು ಮಾತ್ರವಲ್ಲದೆ ಇತಿಹಾಸ ಪುರಾಣ ಮತ್ತು ಪಂಚರಾತ್ರವೂ ಆಗಿದೆ. ಭೂಃ ಎಂಬುದು ಋಗ್ವೇದದ ಸಾರವೆಂದೂ, ಭುವಃ ಎಂಬುದು ಯಜುರ್ವೇದದ ಸಾರವೆಂದೂ, ಸ್ವಃ ಎಂಬುದು ಸಾಮವೇದದ ಸಾರವಾದರೆ ಭೂರ್ಭುವಸ್ಸುವಃ ಎಂಬ ನಾಲ್ಕನೆಯ ವ್ಯಾಹೃತಿಯು ಇತಿಹಾಸ–ಪುರಾಣ ಪಂಚರಾತ್ರವೆಂಬ ಸಕಲಸ್ಮೃತಿಗಳ ಸಾರವಾಗಿದೆ. (ಛಾಂದೋಗ್ಯ ಉಪನಿಷತ್ ಭಾಷ್ಯ ೨ ಅ. ೨೫ ಖಂಡ)

**69. ವ್ಯಾಹೃತಿಪ್ರತಿಪಾದ್ಯ ಭಗವನ್ಮೂರ್ತಿಗಳು** — ವ್ಯಾಹೃತಿಗಳಿಗೆ ಅನಿರುದ್ಧಾದಿ ಚತುರ್ಮೂರ್ತಿಗಳೇ ಪ್ರತಿಪಾದ್ಯವೆಂದು ತಂತ್ರಸಾರದಲ್ಲಿ (೧ ಅ. ೧೨ ಶ್ಲೋ) ಹೇಳಿದೆ —

**ಅನಿರುದ್ಧಾದಿಕಾಸ್ತಾಸಾಂ ದೇವತಾ ವ್ಯುತ್ಕ್ರಮೇಣ ವಾ॥**

ಈ ನಾಲ್ಕು ವ್ಯಾಹೃತಿಗಳಿಗೆ ಅನಿರುದ್ಧಾದಿ ಚತುರ್ಮೂರ್ತಿಗಳು ಅಥವಾ ವ್ಯುತ್ಕ್ರಮದಿಂದ ವಾಸುದೇವಾದಿ ಚತುರ್ಮೂರ್ತಿಗಳು ಪ್ರತಿಪಾದ್ಯಮೂರ್ತಿಗಳು. ಛಲಾರಿ ಟೀಕಾದಲ್ಲಿ ಅನಿರುದ್ಧಾದಿ ಕ್ರಮವು ಗೃಹಸ್ಥರಿಗೂ ವಾಸುದೇವಾದಿ ಕ್ರಮವು ಯತಿಗಳಿಗೂ ಎಂದು ಬೇಕಾದರೂ ತಿಳಿಯಬಹುದೆಂದು ವಿಕಲ್ಪ ಹೇಳಿದ್ದಾರೆ. ಅದರಂತೆ ಭೂಃ ಗೆ ಅನಿರುದ್ಧ ಅಥವಾ ವಾಸುದೇವನೂ, ಭುವಃ ಕ್ಕೆ ಪ್ರದ್ಯುಮ್ನ ಅಥವಾ ಸಂಕರ್ಷಣನೂ, (ಸುವಃ)ಕ್ಕೆ ಸಂಕರ್ಷಣ ಅಥವಾ ಪ್ರದ್ಯುಮ್ನ ಭೂರ್ಭುವಸ್ಸುವಃಕ್ಕೆ ವಾಸುದೇವ ಅಥವಾ ಅನಿರುದ್ಧನೂ ಪ್ರತಿಪಾದ್ಯದೇವತೆಗಳೆಂದು ಹೇಳಿದಂತಾಯಿತು.

**70.** ನ್ಯಾಸವಿಧಾನ — ವ್ಯಾಹೃತಿ ಮಂತ್ರಕ್ಕೆ ಅಂಗನ್ಯಾಸ ಕರನ್ಯಾಸಕ್ರಮವನ್ನು ತಂತ್ರಸಾರದಲ್ಲಿ (೧ ಅ. ೩೮ ಶ್ಲೋ) ಹೀಗೆ ಹೇಳಿದ್ದಾರೆ.

**ತಾರೇಣ ವ್ಯಾಹೃತೀಭಿಶ್ಚ ಜ್ಞೇಯಾನ್ಯಂಗಾನಿ ಪಂಚ ಚ||**

(ಅರ್ಥ) ಓಂಕಾರದಿಂದಲೂ ನಾಲ್ಕು ವ್ಯಾಹೃತಿಗಳಿಂದಲೂ ವ್ಯಾಹೃತಿ ಮಂತ್ರಕ್ಕೆ ಪಂಚಾಂಗನ್ಯಾಸ ಮಾಡಿಕೊಳ್ಳಬೇಕು. ಹೇಗೆಂದರೆ —

| ಕ್ರಮ ಸಂ | ಮಂತ್ರ | ಕರನ್ಯಾಸ | ಅಂಗನ್ಯಾಸ |
|---|---|---|---|
| ೧. | ಓಂ ಓಂ ನಾರಾಯಣಾಯ | ಅಂಗುಷ್ಠಾಭ್ಯಾಂ ನಮಃ | ಹೃದಯಾಯ ನಮಃ |
| ೨. | ಓಂ ಭೂಃ ವಾಸುದೇವಾಯ | ತರ್ಜನೀಭ್ಯಾಂ ನಮಃ | ಶಿರಸೇ ಸ್ವಾಹಾ |
| ೩. | ಓಂ ಭುವಃ ಸಂಕರ್ಷಣಾಯ | ಮಧ್ಯಮಾಭ್ಯಾಂ ನಮಃ | ಶಿಖಾಯೈ ವಷಟ್ |
| ೪. | ಓಂ ಸ್ವಃ ಪ್ರದ್ಯುಮ್ನಾಯ | ಅನಾಮಿಕಾಭ್ಯಾಂ ನಮಃ | ಕವಚಾಯ ಹುಮ್ |
| ೫. | ಓಂ ಭೂ ರ್ಭುವಃ ಸ್ವಃ ಅನಿರುದ್ಧಾಯ | ಕನಿಷ್ಠಿಕಾಭ್ಯಾಂ ನಮಃ | ಅಸ್ತ್ರಾಯ ಫಟ್ |

ಓಂ ಭೂರ್ಭುವಸ್ಸುವರೋಮ್ ಇತಿ ದಿಗ್ಬಂಧಃ (ಅಥವಾ ಮುಗಿಸುವಾಗ —) ದಿಙ್ಮುಖಃ |

**71.** ವ್ಯಾಹೃತಿಮಂತ್ರಕ್ಕೆ ವರ್ಣನ್ಯಾಸ — ಈ ಕ್ರಮವನ್ನೂ ಅಲ್ಲೇ (ತಂತ್ರಸಾರ, ೧ ಅ. ೩೮ ಶ್ಲೋ) ಹೀಗೆ ಹೇಳಿದ್ದಾರೆ —

**ನಾಭಿ–ಹೃತ್–ಕೇಷು ಸರ್ವೇಷು ಚತಸ್ರೋವ್ಯಾಹೃತೀರ್ನ್ಯಸೇತ್।**

(ಅರ್ಥ) ನಾಲ್ಕು ವ್ಯಾಹೃತಿಗಳನ್ನು ಕ್ರಮವಾಗಿ ನಾಭಿ ಹೃದಯ ಮತ್ತು ಶಿರಸ್ಸುಗಳಲ್ಲಿಯೂ (ಇದು ಲಯಕ್ರಮ) ಸರ್ವಾಂಗಗಳಲ್ಲಿಯೂ ನ್ಯಾಸ ಮಾಡಿಕೊಳ್ಳಬೇಕು (ಬ್ರಹ್ಮಚಾರಿಗಳು ಶಿರಸ್ಸು ಹೃದಯ ನಾಭಿಗಳಲ್ಲೂ ಶಿರಸ್ಸಿನಿಂದ ನಾಭಿಯವರೆಗೆ ಎಲ್ಲಾ ಅಂಗಗಳಲ್ಲೂ ನ್ಯಾಸ ಮಾಡಿಕೊಳ್ಳಬೇಕು. (ಒಂದೇ ನ್ಯಾಸ ಮಾಡಿಕೊಂಡರೆ). ಆದರಂತೆ ಗೃಹಸ್ಥರು ಶಿರಸ್ಸು, ನಾಭಿ, ಹೃದಯ, ಶಿರ ಆದಿ ಸರ್ವಾಂಗಗಳಲ್ಲೂ ಮಾಡಿಕೊಳ್ಳಬೇಕು. ನಾಲ್ಕು ನ್ಯಾಸಗಳನ್ನು ಮಾಡಿಕೊಂಡರೆ ಬ್ರಹ್ಮಚಾರಿಗಳು ಸೃಷ್ಟ್ಯಂತವಾಗಿಯೂ ಗೃಹಸ್ಥರು ಸ್ಥಿತ್ಯಂತವಾಗಿಯೂ ಯತಿಗಳು ಲಯಾಂತವಾಗಿಯೂ ಮಾಡಿಕೊಳ್ಳಬೇಕು. ಸೃಷ್ಟಿ ಸ್ಥಿತಿಲಯ ಕ್ರಮಗಳನ್ನು ಅನುಷ್ಠಾನ ಕ್ರಮದಲ್ಲಿ ತೋರಿಸಿದೆ.

**72.** ಅಂಗುಲಿನ್ಯಾಸ — ನಾಲ್ಕು ವ್ಯಾಹೃತಿಗಳನ್ನು ಎರಡೂ ಕೈಗಳ ತರ್ಜನ್ಯಾದಿ ನಾಲ್ಕು ಅಂಗುಲಿಗಳಲ್ಲಿ ಅಂಗುಷ್ಠಗಳಿಂದ ಸ್ಪರ್ಶಮಾಡಿ ನ್ಯಾಸಮಾಡಿ

ಕೊಂಡರೆ ಅಂಗುಲಿನ್ಯಾಸವಾಗುತ್ತದೆ. ಇದರಲ್ಲೂ ಪುನಃ ಸೃಷ್ಟ್ಯಾದಿಕ್ರಮಗಳಿವೆ. ತಮ್ಮ ತಮ್ಮ ಆಶ್ರಮಕ್ಕೆ ತಕ್ಕಂತೆ ಒಂದು ನ್ಯಾಸವನ್ನೋ ನಾಲ್ಕು ನ್ಯಾಸಗಳನ್ನೋ ಸಮಯಾನುಗುಣವಾಗಿ ಮಾಡಿಕೊಳ್ಳಬೇಕು. ಆ ಕ್ರಮಗಳನ್ನೂ ಅನುಷ್ಠಾನ ಕ್ರಮದಲ್ಲೇ ತೋರಿಸಿದೆ.

**73.** ಋಷ್ಯಾದಿಕಥನ :— ವ್ಯಾಹೃತಿಮಂತ್ರದ ಋಷ್ಯಾದಿಗಳನ್ನು ಹೀಗೆ ಹೇಳಿದ್ದಾರೆ (ತಂ. ಸಾ. ೧ ಅ, ೩೬–೭ ಶ್ಲೋ)

**ವ್ಯಾಹೃತೀನಾಂ ಪ್ರಜಾಪತಿಃ | ಮುನಿಸ್, ಛಂದಸ್ತು ಗಾಯತ್ರೀ, ದೇವತಾ ಭಗವಾನ್ ಹರಿಃ||**

(ಅರ್ಥ) ವ್ಯಾಹೃತಿಗಳಿಗೆ 'ಪ್ರಜಾಪತಿ' ಎಂಬ ಹೆಸರುಳ್ಳ ಬ್ರಹ್ಮದೇವರೇ ಋಷಿಗಳು, ಗಾಯತ್ರಿಯೇ ಛಂದಸ್ಸು. 'ಹರಿ' ನಾಮಕ ಭಗವಂತನೇ ದೇವತೆ. ಇದರಿಂದ ಋಷ್ಯಾದಿನ್ಯಾಸ ವಿಧಾನವನ್ನು ಹೀಗೆ ಹೇಳಬೇಕು ಎಂದು ತೋರಿಸಿದಂತಾಯಿತು—ಅಸ್ಯ ಶ್ರೀ ಅಷ್ಟಾಕ್ಷರವ್ಯಾಹೃತಿ ಮಹಾಮಂತ್ರಸ್ಯ ಪ್ರಜಾಪತಿ ನಾಮಕ ಚತುರ್ಮುಖ ಬ್ರಹ್ಮಾ ಋಷಿಃ (ಶಿರಸಿ )। ಗಾಯತ್ರೀ ಛಂದಃ (ಮುಖೇ)। ಮ. ಭಾ. ಮು. (ಶ್ರೀಮದನಿರುದ್ಧಾದಿ ಚತೂರೂಪೀ) ಹರಿರ್ದೇವತಾ (ಹೃದಯೇ) । ಯಥಾಶಕ್ತಿ ಜಪೇ (ಜಪೋಪಸಂಹಾರೇ)ವಿನಿಯೋಗಃ ||

**74.** ಧ್ಯಾನದಲ್ಲಿ ವಿಶೇಷ—ವ್ಯಾಹೃತಿ ಮಂತ್ರಕ್ಕೆ (ನಾಲ್ಕು ಕೈಗಳಿರುವ ಶ್ರೀಹರಿಯ ರೂಪವನ್ನಲ್ಲ— ಎರಡೇ ಕೈಗಳಿರುವ ಮತ್ತು (ಶಂಖ ಚಕ್ರಗಳಿಗೆ ಪ್ರತಿಯಾಗಿ) ಜ್ಞಾನಾಭಯ ಮುದ್ರೆಗಳನ್ನು ಧರಿಸಿದ ರೂಪವನ್ನೇ ಧ್ಯಾನಮಾಡಬೇಕೆಂದು ಹೇಳುತ್ತಾರೆ (ತಂ.ಸಾ.೧ ಅ. ೩೭ ಶ್ಲೋ) —

**ಉದ್ಯದಾದಿತ್ಯವರ್ಣಶ್ಚ ಜ್ಞಾನಮುದ್ರಾಭಯೋದ್ಯತಃ ।**

(ಅರ್ಥ) ವ್ಯಾಹೃತಿಮಂತ್ರಕ್ಕೆ ಧ್ಯಾನಮಾಡಬೇಕಾದ ಶ್ರೀಹರಿಯ ರೂಪವು 'ಉದ್ಯದಾದಿತ್ಯವರ್ಣಃ' ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪು ಬಣ್ಣವುಳ್ಳದ್ದೆಂದೂ, 'ಚ' ಶಬ್ದದಿಂದ ಚಿದಾನಂದೈಕದೇಹವುಳ್ಳದ್ದೆಂದೂ, ಆದರೆ— (ದ್ವಿಬಾಹುವೆಂದೂ) 'ಜ್ಞಾನ...ದ್ಯತಃ' ಬಲಗೈಯಲ್ಲಿ ಜ್ಞಾನಮುದ್ರೆಯನ್ನು (ಅಂಗುಷ್ಠತರ್ಜನಿಗಳನ್ನು ಜೋಡಿಸಿ ಊರ್ಧ್ವಮುಖವಾಗಿ ಹಿಡಿದುಕೊಳ್ಳುವುದು) ಎಡಗೈಯಲ್ಲಿ ಅಭಯಮುದ್ರೆಯನ್ನೂ ಧರಿಸಿದ್ದಾನೆಂದು ಧ್ಯಾನಮಾಡಬೇಕು 'ಉದ್ಯದ್‌ಭಾಸ್ವತ್' ಎಂಬಲ್ಲಿಂದ 'ಧ್ಯೇಯೋಽಹಮೀಶ್ವರಃ ' ಎಂಬ ಒಂದು ಶ್ಲೋಕಕ್ಕೆ ಪ್ರತಿಯಾಗಿ ಈ ಅರ್ಧ ಶ್ಲೋಕ ಹೇಳಿಕೊಳ್ಳಬೇಕೆಂದು ಅರ್ಥ) ಮುಂದೆ ಪ್ರಣವಮಂತ್ರ, ನಾರಾಯಣಾಷ್ಟಾಕ್ಷರ ಮಂತ್ರಗಳಿಗೆ ಹೇಳಿಕೊಂಡಂತೆ ಇದಕ್ಕೂ 'ಲಕ್ಷ್ಮೀಧರಾಭ್ಯಂ...ನಿತ್ಯನಿಶ್ಶೇಷಶಕ್ತಿಮಾನ್' ಎಂಬ ಎರಡು ಶ್ಲೋಕಗಳನ್ನು

ಹೇಳಿಕೊಳ್ಳಬೇಕೆಂಬುದನ್ನು 'ಉದ್ಯದಾದಿತ್ಯವರ್ಣಶ್ಚ' ಎಂಬಲ್ಲಿರುವ 'ಚಕಾರ' ಸೂಚಿಸುತ್ತದೆ.

75. ಜಪಸಂಖ್ಯೆ — ಯದ್ಯಪಿ ಈ ಮಂತ್ರದ ಜಪಕ್ಕೆ ನಿಯತಸಂಖ್ಯೆ ಇಲ್ಲವಾದ್ದರಿಂದ ೧೨, ೨೪, ೩೬, ೧೦೮ ಹೀಗೆ ಎಷ್ಟು ಬೇಕಾದರೂ ಮಾಡಿಕೊಳ್ಳಬಹುದಾದರೂ ಮುಂದೆ ಇನ್ನೂ ಐದು ಮಂತ್ರಗಳನ್ನು ಮಾಡಿಕೊಳ್ಳುವುದು ಉಳಿದಿರುವುದರಿಂದ ಕೇವಲ ಹನ್ನೆರಡು ಜಪವೇ ಸಾಕೆಂದು ನಮ್ಮ ಸಲಹೆ. ಪ್ರತಿನಿತ್ಯ ಎಂಟು ಮಂತ್ರಗಳನ್ನು ಮಾಡಿಕೊಳ್ಳಲು ಅನುಕೂಲವಿಲ್ಲದ ಪಕ್ಷದಲ್ಲಿ ವಾರಕ್ಕೊಂದಾವರ್ತಿ ಅಷ್ಟ ಮಹಾಮಂತ್ರ ಜಪ ಎಂದು ಇಟ್ಟುಕೊಂಡರೆ ಆಗ ನೂರೆಂಟು ಜಪಮಾಡಬಹುದು — ಅದು ಅವರವರ ಅನುಕೂಲ.

76. ಜಪಾರಂಭಕ್ಕೆ ಸಂಕಲ್ಪ — ಮ.ಭಾ.ಮು. ಶ್ರೀ ಹರಿಪ್ರೇರಣಯಾ ಮ.ಭಾ.ಮು. ಶ್ರೀ ಹರಿಪ್ರೀತ್ಯರ್ಥಂ ಯಥಾಶಕ್ತಿ ಅಷ್ಟಾಕ್ಷರವ್ಯಾಹೃತಿಮಹಾಮಂತ್ರ ಜಪಂ ಕರಿಷ್ಯೇ.

77. ಜಪಮುಗಿಸುವಾಗ — (ಗುರುನಮಸ್ಕಾರ ಮಾತ್ರ ಇಲ್ಲ) ಉಳಿದ ಪ್ರಾಣಾಯಾಮಾದಿಗಳೆಲ್ಲ ಧ್ಯಾನವೂ ಸಹ ಮೊದಲು ಮಾಡಿದಂತೆಯೇ ಮಾಡಬೇಕು. ಅನಂತರ 'ಅನೇನ ಅಷ್ಟಾಕ್ಷರವ್ಯಾಹೃತಿಮಹಾಮಂತ್ರಜಪೇನ ಭಗವಾನ್ ಮ.ಭಾ.ಮು. ಶ್ರೀಹರಿಃ ಪ್ರೀಯತಾಂ।, ಸುಪ್ರೀತೋ ವರದೋ ಭವತು। ಶ್ರೀಕೃಷ್ಣಾರ್ಪಣಮಸ್ತು' ಎಂದು ಹೇಳಿ ನೀರು ಬಿಡಬೇಕು.

78. ಜಪಾರ್ಘ್ಯ — ಆಮೇಲೆ ನೀರನ್ನು ವ್ಯಾಹೃತಿ ಮಂತ್ರದಿಂದಲೇ ಮೂರಾವರ್ತಿ ಅಭಿಮಂತ್ರಿಸಿ ಪುನಃ ವ್ಯಾಹೃತಿಮಂತ್ರ ಉಚ್ಚಾರಮಾಡಿ ಮ.ಭಾ.ಮು. ಶ್ರೀಮದನಿರುದ್ಧಾದಿಚತುರೂಪಿ (ಅಥವಾ ಶ್ರೀಮದನಿರುದ್ಧ–ಪ್ರದ್ಯುಮ್ನ –ಸಂಕರ್ಷಣ–ವಾಸುದೇವಾತ್ಮಕ) ಶ್ರೀಹರಿಂ ತರ್ಪಯಾಮಿ ಎಂದು ಅರ್ಘ್ಯ ಕೊಡಬೇಕು — ಒಂದು ಅರ್ಘ್ಯ ಅಥವಾ ೧೦೮ ಜಪ ಮಾಡಿದ್ದರೆ ಮೂರು ಅರ್ಘ್ಯ ಸಾಕು.

ಇಲ್ಲಿಗೆ ವ್ಯಾಹೃತಿ ಮಂತ್ರದ ಪೀಠಿಕೆ ಮುಗಿಯಿತು.

— * — * —

# 4. ವಾಸುದೇವ ದ್ವಾದಶಾಕ್ಷರ ಮಹಾ ಮಂತ್ರದ ಪೀಠಿಕೆ

**79. ಮಂತ್ರೋದ್ಧಾರ**—ವಾಸುದೇವದ್ವಾದಶಾಕ್ಷರ ಮಂತ್ರವು ಬಹಳ ಪ್ರಸಿದ್ಧವಾದ ಮಂತ್ರವಾದ್ದರಿಂದ ಅದನ್ನು ತಂತ್ರಸಾರದಲ್ಲಿ ಸ್ಪಷ್ಟವಾಗಿ ಹೇಳಲಿಲ್ಲ. ಅದು ಹೇಗೆ ಅಭಿವ್ಯಕ್ತವಾಯಿತೆಂಬುದನ್ನು ಮಾತ್ರ ೧ನೇ ಅಧ್ಯಾಯದಲ್ಲಿ (೧೩ನೇ ಶ್ಲೋ) ಹೀಗೆ ಹೇಳಿದ್ದಾರೆ—

'ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿಭ್ಯಸ್ತಥೈವ ಚ।
ವಿಭೇದೋ ದ್ವಾದಶಾರ್ಣಾನಾಂ ಕೇಶವಾದ್ಯಾಶ್ಚ ದೇವತಾಃ'॥

ಅರ್ಥ—ನಾರಾಯಣಾಷ್ಟಾಕ್ಷರಮಂತ್ರದ ಎಂಟು ಅಕ್ಷರಗಳಿಂದಲೂ, ನಾಲ್ಕು ವ್ಯಾಹೃತಿಗಳಿಂದಲೂ ಸೇರಿ ದ್ವಾದಶಾಕ್ಷರಮಂತ್ರವು ಹೊರಟಿತು. ಎಂದರೆ ವಾಸುದೇವದ್ವಾದಶಾಕ್ಷರ ಮಂತ್ರದ ಮೊದಲ ಎಂಟು ಅಕ್ಷರಗಳಾದ 'ಓಂ ನಮೋ ಭಗವತೇ ವಾ' ಎಂಬುವು ನಾರಾಯಣಾಷ್ಟಾಕ್ಷರದ ಎಂಟು ಅಕ್ಷರಗಳಿಂದಲೂ, ಉಳಿದ 'ಸುದೇವಾಯ' ಎಂಬ ನಾಲ್ಕು ಅಕ್ಷರಗಳು ನಾಲ್ಕು ವ್ಯಾಹೃತಿಗಳಿಂದಲೂ ಅಭಿವ್ಯಕ್ತವಾದುವು. ಈ ಹನ್ನೆರಡು ಅಕ್ಷರಗಳಿಗೆ ಕೇಶವಾದಿ ದಾಮೋದರಾಂತವಾದ ಹನ್ನೆರಡು ವಿಷ್ಣುಮೂರ್ತಿಗಳು ವಾಚ್ಯಗಳಾಗಿವೆ.

**80. ವಾಸುದೇವಾದಿ ಚತುರ್ಮೂರ್ತಿಗಳು**:— ವಾಸುದೇವದ್ವಾದಶಾಕ್ಷರ ಮಂತ್ರದಲ್ಲಿ ಹನ್ನೆರಡು ವರ್ಣಗಳಿದ್ದರೂ ೧) ಓಂ, ೨) ನಮಃ, ೩) ಭಗವತೇ, ೪) ವಾಸುದೇವಾಯ ಎಂದು ನಾಲ್ಕೇ ಪದಗಳಿವೆ. ಈ ನಾಲ್ಕು ಪದಗಳಿಗೆ ವಾಸುದೇವಾದಿ ಚತುರ್ಮೂರ್ತಿಗಳು ವಾಚ್ಯಗಳಾಗಿವೆ. ಇದನ್ನು 'ತಾಶ್ಚ ತನ್ಮೂರ್ತಯ ಸ್ತ್ವೇವ ದ್ವಾದಶಾರ್ಣಪದೋದಿತಾಃ' ಎಂಬ ತಂತ್ರಸಾರವಾಕ್ಯ (೧ಅ. ೧೨ ಶ್ಲೋ) ಹೇಳುತ್ತದೆ. (ಅರ್ಥ)—ತಾಶ್ಚ— ಆ ನಾಲ್ಕು ವ್ಯಾಹೃತಿಗಳು ಅನಿರುದ್ಧಾದಿ ಚತುರ್ಮೂರ್ತಿಗಳಿಂದ ಅಥವಾ ವ್ಯುತ್ಕ್ರಮದಿಂದ ವಾಸುದೇವಾದಿ ಮೂರ್ತಿಗಳಿಂದ ವಾಚ್ಯವಾಗಿವೆ. ತನ್ಮೂರ್ತಯಃ ತು ಏವ—ಅವುಗಳಿಗೆ ವಾಚ್ಯಗಳಾದ ವಾಸುದೇವಾದಿ ಚತುರ್ಮೂರ್ತಿಗಳೇ, ದ್ವಾದಶಾರ್ಣ—ಪದ—ಉದಿತಾಃ—ವಾಸುದೇವದ್ವಾದಶಾಕ್ಷರ ಮಂತ್ರದಲ್ಲಿರುವ ನಾಲ್ಕು ಪದಗಳಿಂದ ವಾಚ್ಯವಾಗಿವೆ. ಹೇಗೆಂದರೆ ಓಂ = ವಾಸುದೇವ, ನಮಃ = ಸಂಕರ್ಷಣ, ಭಗವತೇ = ಪ್ರದ್ಯುಮ್ನ, ವಾಸುದೇವಾಯ = ಅನಿರುದ್ಧ.

**81. ವರ್ಣದೇವತೆಗಳು ಮತ್ತು ಪದವಾಚ್ಯಮೂರ್ತಿಗಳು** — ದ್ವಾದಶಾಕ್ಷರ ಮಂತ್ರದ ಹನ್ನೆರಡು ಅಕ್ಷರಗಳ ದೇವತೆಗಳನ್ನೂ ನಾಲ್ಕು ಪದಗಳ ದೇವತೆಗಳನ್ನು ಕೆಳಗಿನ ಪಟ್ಟಿಯು ತೋರಿಸುತ್ತದೆ: —

| ಅಕ್ಷರಗಳು | ಯಾವ ಮಂತ್ರದ ಯಾವ ಅಕ್ಷರ ದಿಂದ ಹುಟ್ಟಿದೆ? | ವರ್ಣದೇವತೆ ಗಳು | ಪದ ದೇವತೆಗಳು |
|---|---|---|---|
| ೧. ಓಂ | ನಾರಾಯಣಾಷ್ಟಾಕ್ಷರ ಮಂತ್ರದ, ಓಂಕಾರದಿಂದ | ಕೇಶವ | ೧) ವಾಸುದೇವ |
| ೨. ನ, | ನ–ಕಾರದಿಂದ | ನಾರಾಯಣ | ೨) ಸಂಕರ್ಷಣ |
| ೩. ಮೋ | ಮೋ–ಕಾರದಿಂದ | ಮಾಧವ | |
| ೪. ಭ | ನಾ–ಕಾರದಿಂದ | ಗೋವಿಂದ | ೩) ಪ್ರದ್ಯುಮ್ನ |
| ೫. ಗ | ರಾ–ಕಾರದಿಂದ | ವಿಷ್ಣು | ಅದೇ |
| ೬. ವ | ಯ–ಕಾರದಿಂದ | ಮಧುಸೂದನ | ಅದೇ |
| ೭. ತೇ | ಣಾ–ಕಾರದಿಂದ | ತ್ರಿವಿಕ್ರಮ | ಅದೇ |
| ೮. ವಾ | ಯ–ಕಾರದಿಂದ ವ್ಯಾಹೃತಿಗಳಿಂದ | ವಾಮನ | ೪) ಅನಿರುದ್ಧ |
| ೯. ಸು | ಭೂಃ ಎಂಬ ವ್ಯಾಹೃತಿಯಿಂದ | ಶ್ರೀಧರ | ಅದೇ |
| ೧೦. ದೇ | ಭುವಃ ಎಂಬ ವ್ಯಾಹೃತಿಯಿಂದ | ಹೃಷೀಕೇಶ | ಅದೇ |
| ೧೧. ವಾ | ಸ್ವಃ ಎಂಬ ವ್ಯಾಹೃತಿಯಿಂದ | ಪದ್ಮನಾಭ | ಅದೇ |
| ೧೨. ಯ | ಭೂರ್ಭುವಸ್ಸುವಃ ಎಂಬುದರಿಂದ | ದಾಮೋದರ | ಅದೇ |

**82. ಪಂಚಾಂಗ ನ್ಯಾಸ**— ಈ ಮಂತ್ರಕ್ಕೆ ಹೇಗೆ ಪಂಚಾಂಗನ್ಯಾಸ ಮಾಡಿಕೊಳ್ಳಬೇಕೆಂದು 'ತಂತ್ರಸಾರ'ದಲ್ಲಿ (೧ ಅ. ೪೦ಶ್ಲೋ) ಹೇಳಿದೆ —

'ಪದೈರ್‌ವ್ಯಸ್ತೈಃ ಸಮಸ್ತೈಶ್ಚ ಜ್ಞೇಯಾನ್ಯಂಗಾನಿ ಪಂಚ ಚ ॥'

(ಅರ್ಥ) ವ್ಯಸ್ತೈಃ – ಬೇರೆ ಬೇರೆಯಾದ, ಪದೈಃ–ನಾಲ್ಕು ಪದಗಳಿಂದಲೂ, ಸಮಸ್ತೈಃ ಚ ಒಟ್ಟು ಸೇರಿದ ಇಡೀ ಮಂತ್ರದಿಂದಲೂ, ಪಂಚ ಚ–ಹೀಗೆ ಐದು ಅಂಗಾನಿ ಅಂಗಗಳಿಂದ ಅಂಗನ್ಯಾಸ–ಕರನ್ಯಾಸವನ್ನು, ಜ್ಞೇಯಾನಿ–ತಿಳಿದುಕೊಳ್ಳಬೇಕು. ಈ ಮಂತ್ರದಲ್ಲಿ ಮೇಲೆ ಹೇಳಿದಂತೆ ನಾಲ್ಕು ಪದಗಳಿವೆ, ಅವಕ್ಕೆ ವಾಸುದೇವಾದಿ ರೂಪಗಳು ವಾಚ್ಯದೇವತೆಗಳು, ಅವರನ್ನು ಸ್ಮರಿಸುತ್ತಾ ನಾಲ್ಕು ಅಂಗಗಳಾದರೆ ಇಡೀಮಂತ್ರಕ್ಕೆ ನಾರಾಯಣ ದೇವತೆಯೆಂದು ತಿಳಿದು ಐದನೇ ಅಂಗವನ್ನು ಮಾಡಬೇಕು. ಹೇಗೆಂದರೆ —

| ಕ್ರಮ ಸಂ | ಮಂತ್ರದ ಪದಗಳು | ವಾಚ್ಯ ಮೂರ್ತಿ | ಕರನ್ಯಾಸ | ಅಂಗನ್ಯಾಸ |
|---|---|---|---|---|
| ೧. | ಓಂ ಓಂ | ವಾಸುದೇವಾಯ | ಅಂಗುಷ್ಠಾಭ್ಯಾಂ ನಮಃ | ಹೃದಯಾಯ ನಮಃ |
| ೨. | ಓಂ ನಮಃ | ಸಂಕರ್ಷಣಾಯ | ತರ್ಜನೀಭ್ಯಾಂ ನಮಃ | ಶಿರಸೇ ಸ್ವಾಹಾ |
| ೩. | ಓಂ ಭಗವತೇ | ಪ್ರದ್ಯುಮ್ನಾಯ | ಮಧ್ಯಮಾಭ್ಯಾಂ ನಮಃ | ಶಿಖಾಯೈ ವಷಟ್ |
| ೪. | ಓಂ ವಾಸುದೇವಾಯ | ಅನಿರುದ್ಧಾಯ | ಅನಾಮಿಕಾಭ್ಯಾಂ ನಮಃ | ಕವಚಾಯ ಹುಮ್ |
| ೫. | ಓಂ ಓಂ ನಮೋ ಭಗವತೇ ವಾಸುದೇವಾಯ | ನಾರಾಯಣಾಯ | ಕನಿಷ್ಠಿಕಾಭ್ಯಾಂ ನಮಃ | ಅಸ್ತ್ರಾಯ ಫಟ್ |

**83.** ವರ್ಣನ್ಯಾಸ — ಈ ಮಂತ್ರದಲ್ಲಿ ಹನ್ನೆರಡು ವರ್ಣಗಳಿವೆ. ಅದಕ್ಕೆ ಕ್ರಮವಾಗಿ ಕೇಶವಾದಿ ದ್ವಾದಶಮೂರ್ತಿಗಳು ವಾಚ್ಯದೇವತೆಗಳು. ಅದನ್ನು ಕ್ರಮವಾಗಿ ಹೇಳಿಕೊಂಡು ಹನ್ನೆರಡು ಅಂಗಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕೆಂದು ತಂತ್ರಸಾರದಲ್ಲಿ ಹೇಳಿದೆ ( ೧ ಅ. ೪೦ ಶ್ಲೋ)

**'ಅಷ್ಟಾಕ್ಷರಾಣಾಂ ಸ್ಥಾನೇಷು ಬಾಹ್ವೋ— ರೂರ್ವೋಶ್ಚ ವಿನ್ಯಸೇತ್'**

(ಅರ್ಥ) ಅಷ್ಟಾಕ್ಷರಾಣಾಂ ,— ನಾರಾಯಣಾಷ್ಟಾಕ್ಷರಮಂತ್ರದ, ಸ್ಥಾನೇಷು — ಎಂಟು ಸ್ಥಾನಗಳಲ್ಲೂ, ಬಾಹ್ವೋಃ— ಎರಡು ತೋಳುಗಳಲ್ಲೂ, ಊರ್ವೋಃ ಚ — ಎರಡು ತೊಡೆಗಳಲ್ಲೂ ಸೇರಿ ಹನ್ನೆರಡು ಸ್ಥಾನಗಳಲ್ಲಿ ಹನ್ನೆರಡು ಅಕ್ಷರಗಳನ್ನು ಕೇಶವಾದಿ ದ್ವಾದಶ—ಮೂರ್ತಿಗಳ ಸ್ಮರಣ ಪೂರ್ವಕ ನ್ಯಾಸಮಾಡಿಕೊಳ್ಳಬೇಕು. — ನಾರಾಯಣಾಷ್ಟಾಕ್ಷರದ ಎಂಟು ಸ್ಥಾನಗಳಾವುವು ಎಂಬುದನ್ನು ತಂತ್ರಸಾರದ ಈ ಅರ್ಧ ಶ್ಲೋಕ (೧ ಅ. ೩೭ ಶ್ಲೋ) ಹೇಳುತ್ತದೆ —

**'ಪದ್—ಜಾನು—ನಾಭಿ—ಹೃದಯ — ವಾಙ್—ನಾಸಾ—ನೇತ್ರ—ಕೇಷು ಚ।**

**ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾದ್.........**

(ಅರ್ಥ) — ಪತ್—ಪಾದ, ಜಾನು—ಮಂಡಿ(ಮೊಣಕಾಲು), ನಾಭಿ—ಹೊಕ್ಕಳು, ಹೃದಯ—ಹೃದಯ, ವಾಕ್—ಬಾಯಿ (ವದನ), ನಾಸಾ—ಮೂಗು, ನೇತ್ರ—ಕಣ್ಣುಗಳು, ಕೇಷು ಚ—ಶಿರಸ್ಸುಗಳಲ್ಲಿ ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾತ್—ನಾರಾಯಣಾಷ್ಟಾಕ್ಷರಮಂತ್ರದ ವರ್ಣಗಳನ್ನು ನ್ಯಾಸಮಾಡಿಕೊಳ್ಳ

ಬೇಕೆಂದು ಹೇಳಿದೆ. ಆದ್ದರಿಂದ ದ್ವಾದಶಾಕ್ಷರಮಂತ್ರಕ್ಕೆ ನ್ಯಾಸಮಾಡಿಕೊಳ್ಳುವಾಗ ಮೊದಲು ಎಂಟು ಸ್ಥಾನಗಳಲ್ಲಿ 'ಓಂ ನಮೋ ಭಗವತೇ ವಾ' ಎಂಬ ಎಂಟುವರ್ಣಗಳನ್ನು ನ್ಯಾಸಮಾಡಿಕೊಂಡು, ಕಡೆಯ ನಾಲ್ಕು ವರ್ಣಗಳನ್ನು ಎರಡು ತೋಳುಗಳಲ್ಲಿ ಎರಡು ತೊಡೆಗಳಲ್ಲೂ ಮಾಡಿಕೊಳ್ಳಬೇಕು. ಮೊದಲನೆಯ ಎಂಟಕ್ಕೆ ಸ್ಪಷ್ಟ್ಯಾದಿ ಕ್ರಮದಿಂದ ಭೇದವುಂಟು. (ಅದನ್ನು ಅನುಷ್ಠಾನ ಕ್ರಮದಲ್ಲಿ ಸ್ಪಷ್ಟವಾಗಿ ತೋರಿಸಿದೆ) ಕಡೆಯ ನಾಲ್ಕಕ್ಕೆ ಭೇದವಿಲ್ಲ.

**84.** ಬೆಟ್ಟುಗಳ ಉಪಯೋಗ —ನಾರಾಯಣಾಷ್ಟಕ್ಷರ ಮಂತ್ರಕ್ಕೆ ನ್ಯಾಸ ಮಾಡಿಕೊಳ್ಳುವಾಗ ಹೇಗೆ ಬೇರೆ ಬೇರೆ ಅಂಗಗಳಲ್ಲಿ ಬೇರೆ ಬೇರೆ ಬೆಟ್ಟುಗಳನ್ನು ಉಪಯೋಗಿಸಿದೆವೋ ಅದೇ ರೀತಿ ಈ ಮಂತ್ರದ ಮೊದಲು ಎಂಟು ವರ್ಣಗಳನ್ನು ನ್ಯಾಸಮಾಡುವಾಗಲೂ ಅದೇ ರೀತಿಯೇ ಬೇರೆ ಬೇರೆ ಬೆಟ್ಟುಗಳಿಂದಲೇ ಮಾಡಿಕೊಳ್ಳಬೇಕು. ಅದನ್ನು ಅನುಷ್ಠಾನ ಕ್ರಮದಲ್ಲಿ ತೋರಿಸಿದೆ. ಕಡೆಯ ನಾಲ್ಕು ವರ್ಣಗಳಿಗೆ ಐದು ಬೆಟ್ಟುಗಳನ್ನು ಉಪಯೋಗಿಸಬೇಕು.

**85.** ವರ್ಣಮೂರ್ತಿಗಳ ಧ್ಯಾನ — ಆದರೆ ವರ್ಣನ್ಯಾಸ ಮಾಡಿಕೊಳ್ಳುವುದಕ್ಕೆ ಮೊದಲೇ, 'ನ್ಯಸನೀಯಂ ಚ ತದ್ವರ್ಣ ದೇವತಾಧ್ಯಾನಪೂರ್ವಕಮ್' ಎಂದು ಪ್ರಣವ ಮಂತ್ರಕ್ಕೆ ಹೇಳಿದ್ದು (೧ ಅ. ೩೫ ಶ್ಲೋ) ಈ ಮಂತ್ರಕ್ಕೂ ಎಲ್ಲ ಮಂತ್ರಗಳಿಗೂ ಉಪಲಕ್ಷಣಯಾ ಅನ್ವಯಿಸುವುದರಿಂದ, ಈ ಮಂತ್ರದ ವರ್ಣದೇವತೆಗಳಾದ ಕೇಶವಾದಿ ದ್ವಾದಶಮೂರ್ತಿಗಳ ಧ್ಯಾನವನ್ನು— ವರ್ಣನ್ಯಾಸ ಆರಂಭಿಸುವುದಕ್ಕೆ ಪ್ರಾರಂಭದಲ್ಲೇ ಮಾಡಿಕೊಳ್ಳಬೇಕು. ಕೇಶವಾದಿ ಮೂರ್ತಿಗಳ ಲಕ್ಷಣಗಳನ್ನು ಸಂಕ್ಷೇಪವಾಗಿ ತಂತ್ರಸಾರದಲ್ಲೇ ಹೇಳಿದ್ದಾರೆ. (೧ ಅ. ೨೪–೨೯ ಶ್ಲೋ)

**86.** ಕೇಶವಾದಿ ಮೂರ್ತಿಗಳ ಲಕ್ಷಣ – ಈ ವಿಚಾರವನ್ನು ಮೇಲೆ ಹೇಳಿದಂತೆ ಸಂಕ್ಷೇಪವಾಗಿ ತಂತ್ರಸಾರದಲ್ಲೇ ಹೇಳಿದ್ದಾರಾದರೂ ಅದು ಎಲ್ಲರಿಗೂ ಹೆಚ್ಚಿನ ವಿವರಣೆಯಿಲ್ಲದೆ ಅರ್ಥವಾಗುವಂತಿಲ್ಲ. ಆದರೆ ಇಷ್ಟು ಮಾತ್ರ ಎಲ್ಲರಿಗೂ ಅರ್ಥವಾಗುತ್ತದೆ – ' **ಶಂಖ ಚಕ್ರಗದಾ ಪದ್ಮ –ಧರಾಶ್ಚೈತೇಹಿ ಸರ್ವಶಃ** ' (ಶ್ಲೋ ೨೮ )— ಇಪ್ಪತ್ತನಾಲ್ಕು ಮೂರ್ತಿಗಳೂ ಶಂಖ ಚಕ್ರಾದಿ ನಾಲ್ಕು ಆಯುಧಗಳನ್ನು ಧರಿಸಿವೆಯಲ್ಲದೆ ಎಲ್ಲವೂ ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪು ಬಣ್ಣವುಳ್ಳವು. ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಪ್ರಾಚೀನರು ತಂತ್ರಸಾರೋಕ್ತ ರೀತಿಯಲ್ಲೇ ಕೇಶವಾದಿ ಚತುರ್ವಿಂಶತಿಮೂರ್ತಿಗಳನ್ನೇ ಅರ್ಧಾರ್ಧ ಶ್ಲೋಕ ರೂಪವಾಗಿ ರಚಿಸಿ ಉಪಕಾರ ಮಾಡಿಕೊಟ್ಟಿದ್ದಾರೆ. ವರ್ಣನ್ಯಾಸ ಮಾಡಿಕೊಳ್ಳುವಾಗ ಆ ಶ್ಲೋಕಗಳನ್ನೇ ಹೇಳಿಕೊಳ್ಳುವುದು ರೂಢಿಯಾದ್ದರಿಂದ ಕೆಳಗೆ

ಆ ಅರ್ಧ ಶ್ಲೋಕಗಳನ್ನೇ (ದಾಮೋದರಾಂತ) ಕೊಟ್ಟಿದೆ. ಸಾಧ್ಯವಾದ ಮಟ್ಟಿಗೆ ಈ ಲಕ್ಷಣಗಳನ್ನು ಅಭ್ಯಾಸಮಾಡಿಕೊಳ್ಳಬೇಕು. ಇದಕ್ಕೆ ಆನಂದ್ ಪ್ರಿಂಟರ್ಸ್, 25. ಗಾಂಧಿಬಜಾರ್, ಬಸವನಗುಡಿ, ಬೆಂಗಳೂರು– 560 004 ಇವರು ಪ್ರಕಟಿಸಿರುವ 'ಚತುರ್ವಿಂಶತಿ ಮೂರ್ತಿಗಳ ಲಕ್ಷಣ' ಎಂಬ ಚಿಕ್ಕ ಪುಸ್ತಕದಲ್ಲಿ ಕೊಟ್ಟಿರುವ ಚಿತ್ರಗಳು ಬಹಳ ಅನುಕೂಲವಾಗಿವೆ.

87. ಕೇಶವಾದಿ ದ್ವಾದಶ ಮೂರ್ತಿಗಳ ಧ್ಯಾನಶ್ಲೋಕಗಳು –

೧. ಚಕ್ರ–ಶಂಖ–ಗದಾಬ್ಜೇತಃ [1]ಕೇಶವಃ ಸೂರ್ಯಸನ್ನಿಭಃ [2]

೨. ನಾರಾಯಣಃ ಸಾಬ್ಜಗದಾ – ಚಕ್ರಶಂಖೀ ರವಿಪ್ರಭಃ ||

೩. ಮಾಧವಶ್ಚಕ್ರ–ಶಂಖಾಬ್ಜ – ಗದೇತೋ ರವಿಸ ಪ್ರಭಃ ||

೪. ಗದಾಬ್ಜ ಶಂಖ –ಚಕ್ರೇತೋ ಗೋವಿಂದೋ ಭಾಸ್ಕರ ದ್ಯುತಿಃ ||

೫. ಕಂಜ [3]–ಕಂಬು[4]–ಚಕ್ರ–ಗದಾ – ಯುತೋ ವಿಷ್ಣು ರವಿಪ್ರಭಃ ||

೬. ಸಶಂಖಾಬ್ಜ–ಗದಾಚಕ್ರಃ ಸೂರ್ಯಾಭೋ ಮಧುಸೂದನಃ ||

೭. ತ್ರಿವಿಕ್ರಮೋ ಗದಾ–ಚಕ್ರಃ – ಶಂಖ–ಪದ್ಮೀ ರವಿದ್ಯುತಿಃ|

೮. ವಾಮನೋಽರಿಗದಾ [5]–ಪದ್ಮ–ಶಂಖೀ ಪ್ರೋದ್ಯದ್–ರವಿಚ್ಛವಿಃ[6]

೯. ಶ್ರೀಧರೋಽರಿ[5]–ಗದಾ–ಕಂಬು–ಪದ್ಮೀ ಪ್ರೋದ್ಯದ್–ರವಿ ಪ್ರಭಃ |

೧೦. ಸಾರಿಪದ್ಮಃ ಶಂಖ –ಗದಿ, ಹೃಷೀಕೇಶೋಽರ್ಕ[7]–ಸನ್ನಿಭಃ ||

೧೧. ಪದ್ಮನಾಭಃ ಸಾಬ್ಜ–ಚಕ್ರ–ಗದಾ–ಶಂಖೋ ರವಿದ್ಯುತಿಃ|

೧೨. ದಾಮೋದರಃ ಶಂಖ–ಗದಾ– ಚಕ್ರ–ಪದ್ಮೀ ರವಿಪ್ರಭಃ||

ಮೇಲಿನ ಶ್ಲೋಕಗಳಲ್ಲಿ ಚಕ್ರಾದ್ಯಾಯುಧಗಳನ್ನು ಬಲಗಡೆಯ ಮೇಲ್ಗೈಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಬಲಗಡೆಯ ಕೆಳಗೈವರೆಗೆ ಆಯಾ ಮೂರ್ತಿಗಳು ಧರಿಸಿವೆ ಎಂದು ಹೇಳಿದೆ. ಎಂದರೆ ಮೊದಲಲ್ಲಿ ಹೇಳಿರುವ ಆಯುಧ ಬಲಗಡೆ ಮೇಲ್ಗೈಯಲ್ಲಿದೆಯೆಂದೂ, ಮುಂದಿನದು (ಎರಡನೆಯದು) ಎಡಗಡೆ ಮೇಲ್ಗೈಯಲ್ಲಿದೆಯೆಂದೂ, ಮೂರನೆಯದು ಎಡಗಡೆಯ ಕೆಳಗೈಯಲ್ಲಿದೆಯೆಂದೂ ಕಡೆಯದು ನಾಲ್ಕನೆಯದು ಬಲಗಡೆಯ ಕೆಳಗೈಯಲ್ಲಿದೆಯೆಂದೂ ತಿಳಿಯಬೇಕು. 'ಕೇಶವಾದಿ ಚತುರ್ವಿಂಶತಿಮೂರ್ತಿಗಳ ಲಕ್ಷಣ'ದಲ್ಲಿರುವ ಚಿತ್ರಗಳನ್ನು ನೋಡಿದರೆ ಈ ವಿಷಯ ಮಂದಟ್ಟಾಗುವುದು.

---

1.ಅಬ್ಜ–ಕಮಲ, ಇತಃ – ಕೂಡಿದವನು, 2. ಸನ್ನಿಭಃ –ಸದೃಶ 3. ಕಂಜ–ಕಮಲ, 4.ಕಂಬು–ಶಂಖ, 5. ಅರಿ–ಚಕ್ರ, 6. ಛವಿಃ–ಕಾಂತಿ, 7. ಅರ್ಕ–ಸೂರ್ಯ.

ಬೇರೆ ಬೇರೆ ಪುಸ್ತಕಗಳಲ್ಲಿ ನಾವು ಕೊಟ್ಟಿರುವ ಪಾಠಕ್ಕೆ ಭಿನ್ನವಾಗಿ ಬೇರೆ ಶಬ್ದಗಳನ್ನು ಕೊಟ್ಟಿರಬಹುದು–ಆದರೆ ಅರ್ಥ ಎಲ್ಲಾ ಒಂದೇ. ಯಾವುದೋ ಒಂದು ಪಾಠವನ್ನು ಮಾತ್ರ ಅಭ್ಯಾಸಮಾಡಬೇಕು – ಇಲ್ಲದಿದ್ದರೆ ತೊಡಕಾಗುತ್ತದೆ.

ಶ್ರೀ ವಾದಿರಾಜ ಸ್ವಾಮಿಗಳೂ 'ಚತುರ್ವಿಂಶತಿ ಮೂರ್ತಿಗಳ ಲಕ್ಷಣ'ವನ್ನು ಶ್ಲೋಕ ರೂಪವಾಗೇ ರಚಿಸಿದ್ದಾರೆ. ಆದರೆ ಅವರು ಬಲಗಡೆಯ ಕೆಳಗೈಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಹೇಳಿ ಎಡಗಡೆಯ ಕೆಳಗೈಗೇ ಮುಗಿಯುವಂತೆ ಹೇಳಿದ್ದಾರೆ. ಆ ಶ್ಲೋಕಗಳನ್ನು ಉಡುಪಿಯ 'ಸ್ತೋತ್ರಮಂಜರಿ' ಯಲ್ಲೂ 'ಮಾಧ್ವಮಂತ್ರ ರತ್ನಾಕರ'ದಲ್ಲೂ ನೋಡಬಹುದು.

ಕೇಶವಾದಿ ಇಪ್ಪತ್ತನಾಲ್ಕು ಹೆಸರುಗಳ ಅರ್ಥವನ್ನು ತಿಳಿದುಕೊಳ್ಳುವುದೂ ಅವಶ್ಯಕವೇ ಆದರೂ ಗ್ರಂಥವಿಸ್ತಾರಭಯದಿಂದ ಅದನ್ನು ಇಲ್ಲಿ ಬಿಟ್ಟಿದೆ. ಕಡ್ಡೀ ಶ್ರೀನಿವಾಸಾಚಾರ್ಯರು ಬರೆದಿರುವ 'ಸಂಧ್ಯಾಮಹತ್ವ'ದಲ್ಲಿ (ಆನಂದ್ ಪ್ರಿಂಟರ್ಸ್ 25, ಗಾಂಧಿ ಬಜಾರ್, ಬಸವನಗುಡಿ, ಬೆಂಗಳೂರು–560004) ಈ ಅರ್ಥಗಳನ್ನು ನೋಡಬಹುದು.

**88. ನ್ಯಾಸ ವಿಧಾನ** –ವರ್ಣನ್ಯಾಸ ಮಾಡಿಕೊಳ್ಳುವಾಗ ಮೊದಲು ಓಂಕಾರವನ್ನು ಉಚ್ಚರಿಸಿ. ಅನಂತರ ಒಂದೊಂದಾಗಿ ದ್ವಾದಶಾಕ್ಷರ ಮಂತ್ರದ ವರ್ಣಗಳನ್ನು ಬಿಂದುಸಹಿತ ಹೇಳಿ ಆ ವರ್ಣದೇವತೆಯನ್ನು ಚತುರ್ಥ್ಯಂತವಾಗಿ ಹೇಳಿ 'ನಮಃ' ಶಬ್ದಪೂರ್ವಕವಾಗಿ ನಿಯತವಾದ ಬೆಟ್ಟಿನಿಂದ (ಅಥವಾ ಬೆಟ್ಟುಗಳಿಂದ) ಉಕ್ತವಾದ ಅಂಗದಲ್ಲಿ ನ್ಯಾಸ ಮಾಡಬೇಕು. ಹೇಗೆಂದರೆ –೧. ಓಂ ಓಂ ಕೇಶವಾಯ ನಮಃ ಎಂದು ಉಚ್ಚಾರ ಮಾಡಿ ನಡುಬೆಟ್ಟಿನಿಂದ ತಲೆಯಲ್ಲಿ ನ್ಯಾಸಮಾಡಿಕೊಳ್ಳಬೇಕು. ಅನಂತರ ೨. ಓಂ ನಂ ನಾರಾಯಣಾಯ ನಮಃ ಎಂದು ಹೇಳಿ ತರ್ಜನೀ ಬೆಟ್ಟು –ನಡು ಬೆಟ್ಟುಗಳಿಂದ ಎರಡು ಕಣ್ಣುಗಳಲ್ಲಿ ಒಟ್ಟಿಗೆ ನ್ಯಾಸಮಾಡಿ ಕೊಳ್ಳಬೇಕು. ಇತ್ಯಾದಿ ಆ ಕ್ರಮವನ್ನು ಅನುಷ್ಠಾನ ಕ್ರಮದಲ್ಲಿ ತೋರಿಸಿದೆ, ಒಂದು ನ್ಯಾಸವೇ ಸಾಕು.

**89. ಅಂಗುಲಿನ್ಯಾಸ** – ಒಂದೊಂದು ಕೈಯಲ್ಲೂ ತರ್ಜನ್ಯಾದಿ ನಾಲ್ಕು ನಾಲ್ಕು ಬೆಟ್ಟುಗಳಿವೆ. ಒಂದೊಂದು ಬೆಟ್ಟಿನಲ್ಲೂ ಮೂರು– ಮೂರು ರೇಖೆಗಳಿವೆ. ಹೀಗೆ ನಾಲ್ಕು ಬೆಟ್ಟುಗಳಲ್ಲಿ (ಒಂದೊಂದು ಕೈಯಲ್ಲೂ) ಹನ್ನೆರಡು –ಹನ್ನೆರಡು ರೇಖೆಗಳಿವೆ. ಮೇಲಿನಂತೆ ಓಂಕಾರ ಸಹಿತ ಮಂತ್ರವರ್ಣಗಳನ್ನು (ಅನುಸ್ವಾರ ಸಹಿತ) ಹೇಳಿ ವರ್ಣದೇವತೆಯ ನಾಮೋಚ್ಚಾರ ಮಾಡಿ ವಂದಿಸುತ್ತಾ ಹನ್ನೆರಡು ರೇಖೆಗಳಲ್ಲಿ (ಎರಡು ಕೈಗಳಲ್ಲೂ ಒಟ್ಟೊಟ್ಟಿಗೆ) ದ್ವಾದಶವರ್ಣಗಳನ್ನು ನ್ಯಾಸ

ಮಾಡಿಕೊಂಡರೆ ಅಂಗುಲಿನ್ಯಾಸವೂ ಆಗುತ್ತದೆ. ಯದ್ಯಪಿ ಈ ಅಂಗುಲಿನ್ಯಾಸ 'ಮಾಧ್ವ ಮಂತ್ರರತ್ನಾಕರಾದಿ' ಯಾವ ಗ್ರಂಥಗಳಲ್ಲೂ ಹೇಳಿಲ್ಲವಾದರೂ ಅವಶ್ಯ ಮಾಡಬೇಕಾದ ನ್ಯಾಸ ಇದು. ಇಷ್ಟವಿಲ್ಲದವರು ಬಿಡಬಹುದು.

**90.** ಅಂಗುಲಿನ್ಯಾಸ ಮಾಡುವ ವಿಧಾನ — ಅಂಗುಲಿನ್ಯಾಸ ಮಾಡುವಾಗ ತರ್ಜನೀ ಬೆಟ್ಟಿನಿಂದ ಆರಂಭಿಸಿ ಉದ್ದಕ್ಕೆ ಎರಡೂ ಕೈಗಳಲ್ಲಿ ಕಿರಿಬೆರಳವರೆಗೆ ಮಾಡಿಕೊಳ್ಳುತ್ತಾ ಹೋಗುವುದು ಬ್ರಹ್ಮಚಾರಿಗಳ ಸೃಷ್ಟಿಕ್ರಮ.

ಗೃಹಸ್ಥರು ಮೊದಲ ಆರು ವರ್ಣಗಳನ್ನು ತರ್ಜನೀ ಬೆಟ್ಟು ಮತ್ತು ನಡುಬೆಟ್ಟುಗಳ ಆರು ರೇಖೆಗಳಲ್ಲಿ (ಬುಡದಿಂದ ಮೇಲಕ್ಕೆ) ನ್ಯಾಸಮಾಡಿ, ಆಮೇಲೆ ಕಿರುಬೆಟ್ಟು ಮತ್ತು ಅನಾಮಿಕ ಬೆಟ್ಟುಗಳ ಆರು ರೇಖೆಗಳಲ್ಲಿ ಉಳಿದ ಆರು ವರ್ಣಗಳನ್ನು ನ್ಯಾಸಮಾಡಬೇಕು, ಇದು ಸ್ಥಿತಿ ಕ್ರಮ. ಮಂತ್ರವಿಧಾನದನದಲ್ಲಿ ಸ್ಪಷ್ಟವಾಗಿ ತೋರಿಸಿದೆ, ಇದೂ ಒಂದು ನ್ಯಾಸವೇ ಸಾಕು.

**91.** ಋಷ್ಯಾದಿನ್ಯಾಸ — ದ್ವಾದಶಾಕ್ಷರಮಂತ್ರದ ಋಷ್ಯಾದಿ ವಿಚಾರವನ್ನು ತಂತ್ರಸಾರದಲ್ಲಿ (೧ಅ. ೧೭ಶ್ಲೋ) ಹೀಗೆ ಸಾಮಾನ್ಯವಾಗಿ ಹೇಳಿದೆ —

'ಋಷಿಶ್ಚ ದೇವತ್ಯೆಕೋಽಹಂ ತಾರಾದೀನಾಂ ವಿಶೇಷತಃ'

ಅರ್ಥ—ತಾರಾದೀನಾಂ—ಪ್ರಣವಮಂತ್ರ, ಅಷ್ಟಾಕ್ಷರಮಂತ್ರ ದ್ವಾದಶಾಕ್ಷರಮಂತ್ರ ಮೊದಲಾದವುಗಳಿಗೆ, ಅಹಂ ಏಕಃ—ನಾನೇ(ನಾರಾಯಣನೇ), ವಿಶೇಷತಃ —ವಿಶೇಷವಾಗಿ(ಮುಖ್ಯವಾಗಿ), ಋಷಿಃ—ಋಷಿಯೂ, ದೇವತಾ ಚ —ದೇವತೆಯೂ ಆಗಿದ್ದೇನೆ. ಅದರಂತೆ ಈ ದ್ವಾದಶಾಕ್ಷರಮಂತ್ರಕ್ಕೂ ಪ್ರಣವಮಂತ್ರ— ಅಷ್ಟಾಕ್ಷರ ಮಂತ್ರಗಳಂತೆ ಅಂತರ್ಯಾಮಿಯಾದ ನಾರಾಯಣನೇ ಋಷಿ; ವಾಸುದೇವರೂಪಿ ಪರಮಾತ್ಮನೇ ದೇವತೆ.

**92.** ಛಂದೋವಿಚಾರ — ಈ ಮಂತ್ರದಲ್ಲಿ ಹನ್ನೆರಡು ವರ್ಣಗಳಿರುವುದರಿಂದಲೂ, ಹನ್ನೆರಡು ಅಕ್ಷರಗಳ ಛಂದಸ್ಸಿಗೆ ಜಗತೀ ಎಂದು ಹೆಸರು ಇರುವುದರಿಂದಲೂ ಈ ಮಂತ್ರವು ಜಗತೀ ಛಂದಸ್ಸಿಗೆ ಸೇರಿದೆ. ಇದನ್ನೇ 'ದ್ವಾದಶಾರ್ಣಸ್ಯ ಜಗತೀ—ಛಂದೋಽನ್ಯತ್ ತಾರವತ್ ಸ್ಮೃತಮ್' ಎಂಬ ವಾಕ್ಯ ಹೇಳುತ್ತದೆ (೧ ಅ. ೩೯ ಶ್ಲೋ)

ಒಟ್ಟಿನಲ್ಲಿ ಋಷ್ಯಾದಿನ್ಯಾಸವನ್ನು ಹೀಗೆ ಮಾಡಬೇಕು —

ಅಸ್ಯ ಶ್ರೀವಾಸುದೇವದ್ವಾದಶಾಕ್ಷರಮಹಾಮಂತ್ರಸ್ಯ ಅಂತರ್ಯಾಮೀ ಋಷಿಃ (ಶಿರಸಿ)। ಜಗತೀ ಛಂದಃ (ಮುಖೇ)। ಮ.ಭಾ.ಮು. ಶ್ರೀವಾಸುದೇವೋ ಭಗವಾನ್ ದೇವತಾ (ಹೃದಯೇ)। ಯಥಾಶಕ್ತಿ ಜಪೇ (ಜಪೋಪಸಂಹಾರೇ) ವಿನಿಯೋಗಃ ॥

**93. ಧ್ಯಾನದಲ್ಲಿ ವಿಶೇಷ**– ಪ್ರಣವಾದಿಮಂತ್ರಗಳಲ್ಲಿ ಆ ದೇವತೆ 'ಉದ್ಯದ್ಭಾಸ್ವತ್ ಸಮಾಭಾಸಃ' ಎಂದು ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪುಬಣ್ಣವುಳ್ಳದ್ದೆಂದೂ ಚಕ್ರಶಂಖಾದಿಗಳನ್ನು ಧರಿಸಿರುವ ನಾಲ್ಕು ಕೈಗಳುಳ್ಳದ್ದೆಂದೂ ಧ್ಯಾನಮಾಡಬೇಕೆಂದೂ ಹೇಳಿದೆ. ಅದಕ್ಕೆ ಪ್ರತಿಯಾಗಿ ಈ ಮಂತ್ರಕ್ಕೆ ಧ್ಯಾನಮಾಡಬೇಕಾದ ವಾಸುದೇವರೂಪವು ಎರಡೇ ಕೈಗಳುಳ್ಳದ್ದೆಂದೂ. ಅವುಗಳಲ್ಲಿ ಶಂಖ–ಚಕ್ರಗಳಿಗೆ ಪ್ರತಿಯಾಗಿ ಬಲಗೈಯಲ್ಲಿ ಅಭಯಮುದ್ರೆಯನ್ನೂ ಎಡಗೈಯಲ್ಲಿ ವರಮುದ್ರೆಯನ್ನೂ ಧರಿಸಿದೆಯೆಂದೂ ಧ್ಯಾನ ಮಾಡಬೇಕು. ಅಲ್ಲದೆ ವಾಸುದೇವನು ಕರ್ಪೂರದಂತೆ ಶುದ್ಧಬಿಳಿವರ್ಣದ ಮೂರ್ತಿಯೆಂದೂ ಧ್ಯಾನಿಸಬೇಕು ಎಂದೂ ತಂತ್ರಸಾರ (೧ಅ. ೩೬ಶ್ಲೋ) ಹೇಳುತ್ತದೆ.

'ಅಚ್ಛವರ್ಣೋಽಭಯವರ – ಕರೋ ಧ್ಯೇಯೋಽಮಿತದ್ಯುತಿಃ॥

(ಅರ್ಥ) ಅಚ್ಛವರ್ಣಃ– ಕರ್ಪೂರದಂತೆ ಶುಭ್ರವಾದ (ಬಿಳೀ) ಬಣ್ಣವುಳ್ಳದ್ದೆಂದೂ, ದ್ವಿಬಾಹುಗಳಲ್ಲಿ (ಬಲಗೈಯಲ್ಲಿ) ಅಭಯ ಮುದ್ರೆಯನ್ನೂ (ಎಡಗೈಯಲ್ಲಿ) ವರಮುದ್ರೆಯನ್ನೂ ಧರಿಸಿದೆಯೆಂದೂ ಧ್ಯಾನ ಮಾಡಬೇಕು. ಈ ಅರ್ಧಶ್ಲೋಕ ಹೇಳಿದಮೇಲೆ ಮುಂದೆ 'ಲಕ್ಷ್ಮೀಧರಾಭ್ಯಾಂ–' ಆರಂಭಿಸಿ 'ನಿತ್ಯನಿಶ್ಶೇಷ ಶಕ್ತಿಮಾನ್' ಎಂಬುದರ ವರೆಗೆ ಮೂರು ಅರ್ಧಗಳನ್ನು ಹೇಳಬೇಕು.

**94. ಮಂತ್ರದಲ್ಲಿರುವ ಪದಗಳ ವ್ಯುತ್ಪತ್ತಿ** – ಈ ಮಂತ್ರದಲ್ಲಿ ನಾಲ್ಕು ಪದಗಳಿವೆಯೆಂದು ಹಿಂದೆಯೇ (ಖಂಡ 80ರಲ್ಲಿ) ತಿಳಿಸಿದೆಯಷ್ಟೆ. ಈ ನಾಲ್ಕು ಪದಗಳಿಗೆ ವಾಸುದೇವಾದಿ ಚತುರ್ಮೂರ್ತಿಗಳು ವಾಚ್ಯರೆಂದೂ ತಂತ್ರಸಾರದಲ್ಲೇ ಹೇಳಿದ್ದನ್ನು ತಿಳಿಸಿದ್ದೇವೆ– 'ತಾಶ್ಚ ತನ್ಮೂರ್ತಯಸ್ತ್ವೇವ ದ್ವಾದಶಾರ್ಣಪದೋದಿತಾಃ' (ತಂತ್ರಸಾರ – ೧ ಅ. ೧೨ಶ್ಲೋ) ಇನ್ನು ಈ ಪದಗಳ ವ್ಯುತ್ಪತ್ತಿಯನ್ನೂ ತಿಳಿದುಕೊಂಡರೆ ಅರ್ಥಾನುಸಂಧಾನಕ್ಕೆ ತುಂಬಾ ಅನುಕೂಲವಲ್ಲದೆ ಮಹಾಫಲಪ್ರದವೂ ಆಗಿದೆ. 'ಓಂ' ಶಬ್ದದ ವ್ಯುತ್ಪತ್ತಿಯನ್ನು ಪ್ರಣವಮಂತ್ರದಲ್ಲೇ (ಖಂಡ 26–27) ಹೇಳಿದ್ದೇವೆ. 'ನಮಃ' ಶಬ್ದದ ವ್ಯುತ್ಪತ್ತಿಯನ್ನು ಅರ್ಥವನ್ನೂ ನಾರಾಯಣಾಷ್ಟಾಕ್ಷರಮಂತ್ರದಲ್ಲಿ ಹೇಳಿದೆ. (ಖಂಡ 52 ನೋಡಿ.)

'ಭಗವತೇ' ಎಂಬುದು ಭಗವಾನ್ ಶಬ್ದದ ಚತುರ್ಥೀ ಏಕವಚನ ರೂಪ, 'ಭಗಃ' ಅಸ್ಯಾಸ್ತೀತಿ ಭಗವಾನ್, + ತಸ್ಮೈ = ಭಗವತೇ ಎಂಬುದು ಇದರ ವಿಗ್ರಹವಾಕ್ಯ

'ಭಗಃ' ಎಂದರೆ ಐಶ್ವರ್ಯಾದಿ ಷಡ್ಗುಣಗಳು ಎಂಬುದನ್ನು —

'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನ — ವಿಜ್ಞಾನ ಯೋಶ್ಚೈವ ಷಣ್ಣಾಂ ಭಗ ಇತೀರಣಾತ್'

ಎಂಬ ಸ್ಮೃತಿವಾಕ್ಯ ಹೇಳುತ್ತದೆ. ಇದರಲ್ಲಿ 'ಸಮಗ್ರಸ್ಯ' ಎಂಬುದು ವೀರ್ಯಸ್ಯ ಮೊದಲಾದ ಎಲ್ಲ ಪದಗಳಿಗೂ ಅನ್ವಯಿಸುತ್ತದೆ. ಅದರಂತೆ ೧.ಪರಿಪೂರ್ಣವಾದ ಐಶ್ವರ್ಯವೂ, ೨. ಪರಿಪೂರ್ಣವಾದ ವೀರ್ಯ ಅಥವಾ ಪರಾಕ್ರಮವೂ, ೩. ಎಣೆಯಿಲ್ಲದ ಯಶಸ್ಸು ಅಥವಾ ಕೀರ್ತಿಯೂ, ೪.ಅನಂತ ಸೂರ್ಯರಿಗೆ ಮೀರಿದ ಪ್ರಕಾಶ ಅಥವಾ ಕಾಂತಿಯೂ, ೫. ಪರಿಪೂರ್ಣವಾದ ಜ್ಞಾನವೂ ಮತ್ತು ೬. ಅನಂತವಾದ ವಿಜ್ಞಾನ (ವಿಶೇಷವಾದ ವಿವೇಚನಾರೂಪವಾದ ನಿರ್ಣಯಾತ್ಮಕ ಜ್ಞಾನ) ಈ ಆರು ಗುಣಗಳಿಗೇ 'ಭಗ' ಎಂದು ಹೆಸರು. ಆರು ಗುಣ 'ಉಳ್ಳವನು' (ತದಸ್ಯಾಸ್ತೀತಿ) ಎಂಬ ಅರ್ಥದಲ್ಲಿ ಮತುಪ್* ಪ್ರತ್ಯಯ ಬಂದು ಅದರ ಮಕಾರಕ್ಕೆ ವಕಾರಾದೇಶ ಬಂದು† ಭಗವಾನ್ ಎಂದಾಗುತ್ತದೆ, ಅದರ ಚತುರ್ಥೀ ಏಕವಚನ ರೂಪವೇ 'ಭಗವತೇ'; ಆದ್ದರಿಂದ ಇದಕ್ಕೆ ಪರಿಪೂರ್ಣವಾದ ಐಶ್ವರ್ಯಾದಿ ಷಡ್ಗುಣಗಳುಳ್ಳವನು ಎಂದರ್ಥವಾಗುತ್ತದೆ.

'ವಾಸುದೇವ ' ಶಬ್ದಾರ್ಥವನ್ನು 'ವಾಸನಾದ್ ವಾಸುದೇವೋಽಸಿ' ಎಂದು ನಾವು ಸಂಧ್ಯಾವಂದನೆಯಲ್ಲಿ ಹೇಳಿಕೊಳ್ಳುವ ಮಹಾಭಾರತದ ಶ್ಲೋಕವೇ ವಿವರಿಸುತ್ತದೆ. ೧ 'ವಾಸನಾದ್ ವಾಸುದೇವೋಽಸಿ' — ಹೇ, ಸ್ವಾಮಿ, ನೀನು ಸಕಲ ಜಗತ್ತುಗಳಲ್ಲೂ ಒಳಗೆ–ಹೊರಗೆಲ್ಲಾ ವ್ಯಾಪಿಸಿಕೊಂಡು ವಾಸಮಾಡುತ್ತಿರುವುದರಿಂದ ನಿನಗೆ 'ವಾಸುದೇವ' ನೆಂಬ ಹೆಸರು ಪ್ರಸಿದ್ಧವಾಗಿದೆ. 'ವಾಸಿತಂ ತೇ ಜಗತ್‌ತ್ರಯಮ್'ಮೂರು ಲೋಕಗಳೂ — ಎಂದರೆ (೧ನೇ ಅರ್ಥ) ಸ್ವರ್ಗ. ಭೂಮಿ, ಪಾತಾಳ ಎಂಬ ಮೂರು ಲೋಕಗಳು (೨ನೇ ಅರ್ಥ) ಅನಂತಾಸನ ಶ್ವೇತದ್ವೀಪ ಮತ್ತು ವೈಕುಂಠ ಎಂಬ ಮೂರು ಲೋಕಗಳು, (೩ನೇ ಅರ್ಥ) ಈ ಭೂಮಿಯೂ, ಅದರ ಮೇಲಿರುವ ಭುವರಾದಿ ಆರು ಊರ್ಧ್ವ ಲೋಕಗಳು, ಕೆಳಗಿರುವ ಪಾತಾಳಾದಿ ಸಪ್ತ ಲೋಕಗಳು (ಒಟ್ಟಿನಲ್ಲಿ ಹದಿನಾಲ್ಕು ಲೋಕಗಳೂ) ನಿನ್ನಲ್ಲಿ ಆಶ್ರಿತವಾಗಿರುವುದರಿಂದಲೂ ನೀನು ವಾಸುದೇವ ನಾಮಕನಾಗಿದ್ದೀಯೆ. 'ಸರ್ವಭೂತ ನಿವಾಸೋಽಸಿ' ಸಕಲ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿಯಾದ ಒಂದು ರೂಪದಿಂದಲೂ ಆ ಪ್ರಾಣಿಯ ದೇಹದಷ್ಟೇ ದೊಡ್ಡದಾದ ಅಥವಾ ಚಿಕ್ಕದಾದ ರೂಪದಿಂದ ಆ ಪ್ರಾಣಿಯ ಸಕಲ ದೇಹವನ್ನು ವ್ಯಾಪಿಸಿಕೊಂಡಿರುವ ಇನ್ನೊಂದು ವ್ಯಾಪ್ತರೂಪದಿಂದಲೂ ನೆಲೆಸಿರುವುದರಿಂದಲೂ

---

* ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ (ಪಾ. ೫।೨।೯೪)

† ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ (ಪಾ.೮।೨।೯)

ನೀನು ವಾಸುದೇವ ನಾಮಕನಾಗಿದ್ದೀಯೆ 'ವಾಸುದೇವ ನಮೋಽಸ್ತು ತೇ' ಇಂಥಾ ವಾಸುದೇವನಾಮಕನಾದ ನಿನಗೆ ನಮಸ್ಕಾರ—ಎಂಬುದು ಭಾರತಶ್ಲೋಕದ ಅರ್ಥ.

ಇನ್ನು ವ್ಯಾಕರಣ ಪ್ರಕಾರ ವಸುದೇವಸ್ಯ ಅಪತ್ಯಂ ಪುಮಾನ್ — ವಾಸುದೇವಃ, ತಸ್ಮೈ ವಾಸುದೇವಾಯ ಎಂಬುದು ವಿಗ್ರಹ ವಾಕ್ಯ. ಇದಕ್ಕೆ ವಸುದೇವನ ಮಗನಾದ ಕಾರಣವೂ ವಾಸುದೇವ ಎಂಬುದು ಒಂದರ್ಥ. 'ವೃಷ್ಣೀನಾಂ ವಾಸುದೇವೋಽಸ್ಮಿ' ಎಂಬ ಶ್ಲೋಕಕ್ಕೆ (೧೦ ಅ. ೩೭ಶ್ಲೋ) ಅರ್ಥ ಹೇಳುವಾಗ ಗೀತಾಭಾಷ್ಯದಲ್ಲೇ ಬೇರೆ ಅರ್ಥ ಹೇಳಿದ್ದಾರೆ— 'ಆಚ್ಛಾದಯತಿ ಸರ್ವಂ ವಾಸಯತಿ, ವಸತಿ ಚ ಸರ್ವತ್ರೇತಿ ವಾಸುಃ' ಇದನ್ನು ಗೀತಾವಿವೃತಿಯಲ್ಲಿ ಹೀಗೆ ವಿವರಿಸಿದ್ದಾರೆ— ೧. ವಾಸಯತಿ—ಸರ್ವಮಾಚ್ಛಾದಯತಿ, ನಿವಾಸಯತೀತಿ ವಾ ವಾಸುಃ— ಸಮಸ್ತವನ್ನೂ ಆವರಿಸಿಕೊಂಡು ಮುಚ್ಚಿಕೊಂಡಿರುವುದರಿಂದಲೂ, ಎಲ್ಲವನ್ನೂ ತನ್ನಲ್ಲಿ ವಾಸಮಾಡುವಂತೆ ಅಡಗಿಸಿಕೊಂಡಿರುವುದರಿಂದಲೂ ವಾಸು ಎನ್ನಿಸಿದ್ದಾನೆ. ೨. ಸರ್ವತ್ರ ವಸತೀತಿ ವಾ ವಾಸುಃ — ಎಲ್ಲಾ ಕಡೆಯೂ ವಾಸಮಾಡುವುದರಿಂದಲೂ ವಾಸುಃ 'ದೀವ್ಯತೀತಿ ದೇವಃ' ಕ್ರೀಡಾದಿಗುಣ ವಿಶಿಷ್ಟನಾದ್ದರಿಂದ ದೇವ. ವಾಸುಶ್ಚಾಸೌ ದೇವಶ್ಚ ವಾಸುದೇವಃ (ವ್ಯಾಕರಣಾಂಶ) ವಸ ಆಚ್ಛಾದನೇ (ಅದಾದಿ ೨ಗಣ ಆತ್ಮ) ವಸ ನಿವಾಸೇ (ಭ್ವಾದಿ ೧ಗಣ. ಪರ) ಇತ್ಯತೋ ಣ್ಯಂತಾದುಣ್— ಪ್ರೇರಣಾರ್ಥದಲ್ಲಿ ಉಣ್ ಪ್ರತ್ಯಯ. ವಸತೇಃ ಉಣ್—ವಸ್‌ಧಾತುವಿನ ಮೇಲೆ —ಕರ್ತರಿ ಉಣ್, ಗೀತಾಭಾಷ್ಯದಲ್ಲಿ ಈ ಅರ್ಥಕ್ಕೆ ಪ್ರಮಾಣ ಹೇಳಿದ್ದಾರೆ— 'ಛಾದಯಾಮಿ ಜಗದ್ವಿಶ್ವಂ ಭೂತ್ವಾ ಸೂರ್ಯ ಇವಾಂಶುಭಿಃ। ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋಽಸ್ಮ್ಯಹಮ್।' ಇತಿ ಮೋಕ್ಷಧರ್ಮೇ। (ಅರ್ಥ) ಸೂರ್ಯನು ತನ್ನ ಕಿರಣಗಳಿಂದ ಸಕಲ ಪ್ರಪಂಚವನ್ನೂ ಹೇಗೆ ಆವರಿಸುತ್ತಾನೋ ಹಾಗೆಯೇ ನಾನು ಬ್ರಹ್ಮಾಂಡವನ್ನು ನನ್ನ ಶಕ್ತಿಯಿಂದ ಆವರಿಸಿದ್ದೇನೆ (ಮುಚ್ಚಿದ್ದೇನೆ). ಸಕಲ ಭೂತಗಳಲ್ಲೂ ವಾಸಮಾಡುವುದರಿಂದಲೂ ವಾಸುದೇವನಾಗಿದ್ದೇನೆ ಎಂದು ಶಾಂತಿಪರ್ವದ ಮೋಕ್ಷಧರ್ಮದಲ್ಲಿ ಹೇಳಿದೆ.

ಇಲ್ಲಿಗೆ ವಾಸುದೇವದ್ವಾದಶಾಕ್ಷರ ಮಹಾಮಂತ್ರದ ಪೀಠಿಕೆ ಮುಗಿಯಿತು.

—*—*—

# 5. ಬ್ರಹ್ಮ ಗಾಯತ್ರೀ ಮಹಾ ಮಂತ್ರದ ಪೀಠಿಕೆ

95. ಮಂತ್ರೋದ್ಧಾರ— ಬ್ರಹ್ಮಗಾಯತ್ರೀ ಮಂತ್ರವು ಹೇಗೆ ನಿಷ್ಪನ್ನ ವಾಯಿತೆಂಬುದನ್ನು ತಂತ್ರಸಾರದಲ್ಲಿ (೧ ಅ. ೧೪ ಶ್ಲೋ) ಹೀಗೆ ವರ್ಣಿಸಿದ್ದಾರೆ—

'ನಾರಾಯಣಾಷ್ಟಾಕ್ಷಚ್ಚ ವ್ಯಾಹೃತಿ ತ್ರಿಗುಣಾತ್ ಪುನಃ।
ವೇದಮಾತಾ ತು ಗಾಯತ್ರೀ ದ್ವಿಗುಣಾ(ತ್)ದ್ವಾದಶಾಕ್ಷರಾತ್॥

(ಅರ್ಥ)—ನಾರಾಯಣಾಷ್ಟಾಕ್ಷರಾಚ್ಚ – ಒಂದಾವರ್ತಿ ನಾರಾಯಣಾ ಷ್ಟಾಕ್ಷರದ ಎಂಟು ವರ್ಣಗಳು ಸೇರಿದ್ದರಿಂದಲೂ ವ್ಯಾಹೃತಿ–ತ್ರಿಗುಣಾತ್– ಮೂರಾವರ್ತಿ ನಾಲ್ಕು ವ್ಯಾಹೃತಿಗಳು ಸೇರಿದ್ದರಿಂದಲೂ, ವೇದಮಾತಾ ತು –ಸಕಲ ವೇದಗಳಿಗೂ ತಾಯಿ ಎನಿಸಿದ, ಗಾಯತ್ರೀ– ಗಾಯತ್ರೀಮಂತ್ರವು (ಭಿನ್ನಾ) –ಹೊರಟಿತು (ರೂಪುಗೊಂಡಿತು). ಹೇಗೆಂದರೆ ನಾರಾಯಣಾಷ್ಟಕ್ಷರದ ಎಂಟು ವರ್ಣಗಳಿಂದ ಗಾಯತ್ರಿಯ ಪ್ರಥಮ ಪಾದದ 'ತತ್ ಸವಿತುರ್ ವರೇಣಿಯಂ (ವರೇಣ್ಯಂ)' ಎಂಬ ಎಂಟು ಅಕ್ಷರಗಳು ಒಡೆದು ಬಂದುವು. ವ್ಯಾಹೃತಿಗಳು ನಾಲ್ಕಾದ್ದರಿಂದ ಆ ನಾಲ್ಕು ವ್ಯಾಹೃತಿಗಳು ನಾಲ್ಕಾವರ್ತಿ ಹರಡಿದ್ದರಿಂದ ೪x೪=೧೬ ಎಂದರೆ ದ್ವಿತೀಯ –ತೃತೀಯ ಚರಣಗಳ ಹದಿನಾರು ಅಕ್ಷರಗಳು ಒಡೆದು ಬಂದವು, ಹೀಗೆ ೮+೧೬ ಸೇರಿ ಇಪ್ಪತ್ತನಾಲ್ಕು ಅಕ್ಷರಗಳ ಗಾಯತ್ರೀಮಂತ್ರ ರೂಪುಗೊಂಡಿತು– ಇದು ಒಂದನೇ ಕ್ರಮ.

ಎರಡನೇ ಕ್ರಮ– ನಾರಾಯಣಾಷ್ಟಾಕ್ಷರದ ಎಂಟು ವರ್ಣಗಳಿಂದ ಹಿಂದಿನಂತೆಯೇ ಗಾಯತ್ರಿಯ ಪ್ರಥಮ ಚರಣದ ಎಂಟು ವರ್ಣಗಳು ಒಡೆದು ಬಂದವು. ಪುನಃ–ಆಮೇಲೆ, ನಾಲ್ಕು ವ್ಯಾಹೃತಿಗಳಿಂದ, ಭರ್ಗಃ ದೇವ ಎಂಬ ನಾಲ್ಕು ವರ್ಣಗಳು ಒಡೆದುಬಂದುವು. ಕೊನೆಗೆ, ದ್ವಾದಶಾಕ್ಷರಾತ್– ವಾಸುದೇವದ್ವಾದಶಾಕ್ಷರ ಮಂತ್ರದ ಹನ್ನೆರಡು ವರ್ಣಗಳಿಂದ ಮುಂದಿನ ಹನ್ನೆರಡು ವರ್ಣಗಳು ಉದ್ಭಿನ್ನವಾದವು; (ವಾಸುದೇವ ದ್ವಾದಶಾಕ್ಷರಮಂತ್ರವೇ ನಾರಾಯಣಾಷ್ಟಾಕ್ಷರದ ಎಂಟು ಅಕ್ಷರಗಳಿಂದಲೂ ನಾಲ್ಕು ವ್ಯಾಹೃತಿಗಳಿಂದಲೂ ಉತ್ಪನ್ನವಾಗಿರುವುದರಿಂದ –ನಾರಾಯಣಾಷ್ಟಾಕ್ಷರದ ಮೊದಲ ನಾಲ್ಕು ವರ್ಣಗಳಿಂದ (ಓಂ ನಮೋ ನಾ–ಎಂಬ ಅಕ್ಷರಗಳಿಂದ) ಗಾಯತ್ರಿಯ ದ್ವಿತೀಯ ಪಾದದ ಮುಂದಿನ) ನಾಲ್ಕು ವರ್ಣಗಳು – 'ಸ್ಯ ಧೀಮಹಿ' ಎಂಬವೂ,

ನಾರಾಯಣಾಷ್ಟಾಕ್ಷರದ ಕಡೆಯ ನಾಲ್ಕು ವರ್ಣಗಳಿಂದ ತೃತೀಯ ಚರಣದ 'ಧಿಯೋ ಯೋ ನಃ' ಎಂಬ ನಾಲ್ಕು ವರ್ಣಗಳೂ ಹೊರಟವು, ನಾಲ್ಕು ವ್ಯಾಹೃತಿಗಳಿಂದ 'ಪ್ರಚೋ–ದ–ಯಾತ್' ಎಂಬ ಕಡೆಯ ನಾಲ್ಕು ವರ್ಣಗಳೂ ಒಡೆದುಬಂದವು, ಹೀಗೆ ಇಪ್ಪತ್ತು ನಾಲ್ಕು ಅಕ್ಷರಗಳಾದವು.

ಮೂರನೇ ವಿಧಾನ— 'ತ್ರಿಗುಣಾತ್' ಎಂಬುದನ್ನು 'ನಾರಾಯಣಾಷ್ಟಾಕ್ಷರಾಚ್ಚ' ಎಂಬುದಕ್ಕೆ ಅನ್ವಯಿಸಿದರೆ ನಾರಾಯಣಾಷ್ಟಾಕ್ಷರವೇ ಮೂರಾವರ್ತಿ ಆವೃತ್ತಿಯಾದ್ದರಿಂದ ಗಾಯತ್ರಿಯ ಮೂರು ಪಾದಗಳಾದುವು. ಆದ್ದರಿಂದಲೇ ಸಂಧ್ಯಾಗಾಯತ್ರಿಯು (ವಿಶ್ವಾಮಿತ್ರ ಗಾಯತ್ರಿಯು) ಸಿದ್ಧಿಸಬೇಕಾದರೆ ನಾರಾಯಣಾಷ್ಟಾಕ್ಷರ ಮಂತ್ರವನ್ನು ಗಾಯತ್ರೀ ಜಪದ ಮೂರರಷ್ಟು ಜಪಿಸಬೇಕೆಂದು 'ಸದಾಚಾರಸ್ಮೃತಿ' ಯಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ—

'ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್'
(ಶ್ಲೋ೧೧)

ನಾಲ್ಕನೇ ವಿಧಾನ—ವ್ಯಾಹೃತಿಗಳು ನಾಲ್ಕು ಇದ್ದರೂ ಆ ನಾಲ್ಕು ವ್ಯಾಹೃತಿಗಳಲ್ಲೇ ಒಟ್ಟು ಎಂಟು ವರ್ಣಗಳಿರುವುದರಿಂದ —ವ್ಯಾಹೃತಿ –ತ್ರಿಗುಣಾತ್– ಎಂಟು ಅಕ್ಷರಗಳೇ ಮೂರಾವರ್ತಿ ಸೇರುವುದರಿಂದಲೂ ಇಪ್ಪತ್ತನಾಲ್ಕು ಅಕ್ಷರಗಳ ಗಾಯತ್ರೀ ರೂಪಗೊಳ್ಳುತ್ತದೆ—೮×೩ = ೨೪.

ಐದನೇ ವಿಧಾನ—'ದ್ವಿಗುಣಾತ್ ದ್ವಾದಶಾಕ್ಷರಾತ್' ವಾಸುದೇವ ದ್ವಾದಶಾಕ್ಷರವೇ ಎರಡಾವರ್ತಿ ಸೇರಿದರೂ (೧೨×೨ = ೨೪) ಗಾಯತ್ರೀ ರೂಪಗೊಳ್ಳುತ್ತದೆ.

ಆರನೇ ವಿಧಾನ— ವ್ಯಾಹೃತಿತ್ರಿಗುಣಾತ್–ನಾಲ್ಕು ವ್ಯಾಹೃತಿಗಳು ಮೂರಾವರ್ತಿ ಸೇರಿದರೆ (೪×೩ = ೧೨) ಹನ್ನೆರಡು ವರ್ಣಗಳು ಆಗುತ್ತದೆ; ಪುನಃ— ಆಮೇಲೆ, ದ್ವಾದಶಾಕ್ಷರಾತ್–ದ್ವಾದಶಾಕ್ಷರದಿಂದ ಹನ್ನೆರಡು ಸೇರಿ ಒಟ್ಟು ಇಪ್ಪತ್ತನಾಲ್ಕು ಅಕ್ಷರದ ಗಾಯತ್ರೀ ಆಗುತ್ತದೆ—ಹೇಗೆಂದರೆ ಮೊದಲು ಎರಡಾವರ್ತಿ ನಾಲ್ಕು–ನಾಲ್ಕು ಸೇರಿ ಪ್ರಥಮ ಚರಣದ ಎಂಟು ಅಕ್ಷರಗಳಾಗುತ್ತವೆ. (ತತ್ ಸವಿತುಃ + ವರೇಣ್ಯಂ), ಮೂರನೇ ಆವೃತ್ತಿಯಲ್ಲಿ —ಭರ್ಗೋ ದೇವ ಎಂಬ ನಾಲ್ಕು ವರ್ಣಗಳು ಒಡೆಯುತ್ತವೆ. ದ್ವಾದಶಾಕ್ಷರದಲ್ಲಿ 'ಓಂ ನಮೋ ಭ' ಎಂಬ ನಾಲ್ಕು ಅಕ್ಷರಗಳಿಂದ 'ಸ್ಯ ಧೀಮಹಿ ಎಂಬ ನಾಲ್ಕು ವರ್ಣಗಳೂ, ಮುಂದಿನ ಎಂಟು ವರ್ಣಗಳಿಂದ ತೃತೀಯ ಚರಣದ ಎಂಟು ಅಕ್ಷರಗಳೂ ಹೊರಬಂದವು. ಹೀಗೆ ಗಾಯತ್ರಿಯು ಆರು ವಿಧವಾಗಿ ಉತ್ಪನ್ನವಾಗಿದೆ. ಇದನ್ನೇ 'ಷಡ್ವಿಧ

ಗಾಯತ್ರೀ' ಎನ್ನುತ್ತಾರೆ. ರಾಯರ 'ಪ್ರಾತಃ ಸಂಕಲ್ಪಗದ್ಯ'ದಲ್ಲೂ 'ಷಡ್ವಿಧ ಗಾಯತ್ರಿ'ಯ ಹೇಳಿಕೆಯಿದೆ. ಛಾಂದೋಗ್ಯೋಪನಿಷತ್ತಿನಲ್ಲಿ 'ಷಡ್ವಿಧ ಗಾಯತ್ರಿ'ಯ ಇನ್ನೊಂದು ವಿಧ ವರ್ಣನೆ ಬರುವುದು (೩ ಅಧ್ಯಾಯ, ೧೨ ನೇ ಖಂಡ) ಈ ಆರು ವಿಧಗಳನ್ನು ಕೆಳಗೆ ಸಂಗ್ರಹವಾಗಿ ಸೂಚಿಸಲಾಗಿದೆ –

## ಷಡ್ವಿಧ ಗಾಯತ್ರೀ ಉದ್ಭವ ಪ್ರಕಾರ

೧. ನಾರಾಯಣಾಷ್ಟಕ್ಷರ ೮ + ನಾಲ್ಕು ವ್ಯಾಹೃತಿಗಳು ನಾಲ್ಕಾವರ್ತಿ (೪X೪ = ೧೬) = ೨೪

೨. ನಾ. ೮ + ವ್ಯಾಹೃತಿಗಳು ೪ + ವಾ.ದ್ವಾ. ೧೨ = ೨೪

೩. ನಾರಾಯಣಾಷ್ಟಾಕ್ಷರ ಮೂರಾವರ್ತಿ–೮X೩ = ೨೪

೪. ನಾಲ್ಕು ವ್ಯಾಹೃತಿಗಳ ೮ ವರ್ಣಗಳು ಮೂರಾವರ್ತಿ –೮X೩ = ೨೪

೫. ವಾಸುದೇವ ದ್ವಾದಶಾಕ್ಷರ ಎರಡಾವರ್ತಿ –೧೨X೨ = ೨೪

೬. ವ್ಯಾಹೃತಿಗಳು ೪ ಮೂರಾವರ್ತಿ–೪X೩ = ೧೨ + ವಾಸುದೇವದ್ವಾದಶಾಕ್ಷರ ೧೨ = ೨೪

**96.** ಗಾಯತ್ರಿಯ ಮೂರು ಪಾದಗಳು: – ಮಹಾನಾರಯಣೋಪನಿಷತ್ತಿನಲ್ಲಿ (೩೫ ಅ) 'ತ್ರಿಪದಾ ಗಾಯತ್ರೀ' ಎಂಬ ಉಲ್ಲೇಖವಿದೆ. ಆದರಂತೆ ಗಾಯತ್ರಿಯು ಎಂಟೆಂಟು ಅಕ್ಷರಗಳ ಮೂರು ಪಾದವುಳ್ಳದ್ದಾಗಿದೆ. ಪ್ರಥಮ ಪಾದದ 'ವರೇಣ್ಯಂ' ಎಂಬುದನ್ನು ಒಡೆದು 'ವರೇಣಿಯಂ' ಎಂದು ನಾಲ್ಕು ಅಕ್ಷರಗಳಾಗಿ ಮಾಡಿಕೊಳ್ಳಬೇಕು. ೧. ತತ್, ೨. ಸ, ೩. ವಿ, ೪. ತುಃ, ೫. ವ., ೬. ರೇ, ೭. ಣಿ, ೮. ಯಮ್ ಹೀಗೆ ಪ್ರಥಮ ಪಾದದಲ್ಲಿ ಎಂಟು ಅಕ್ಷರಗಳಿವೆ. ಎರಡನೇ ಪಾದದಲ್ಲಿ ೧. ಭರ್, ೨. ಗಃ, ೩. ದೇ, ೪. ವ, ೫. ಸ್ಯ, ೬. ಧೀ, ೭. ಮ, ೮.ಹಿ, ಎಂದು ಎಂಟುವರ್ಣಗಳೂ, ಮೂರನೇ ಪಾದದಲ್ಲಿ ೧. ಧಿ, ೨. ಯೋ, ೩. ಯೋ, ೪. ನಃ, ೫. ಪ್ರ, ೬. ಚೋ, ೭. ದ, ೮. ಯಾತ್ ಎಂದು ಎಂಟು ವರ್ಣಗಳಿವೆ. ಈ ಮೂರು ಪಾದಗಳು ಭೂಃ, ಭುವಃ, ಸ್ವಃ ಎಂಬ ಮೂರು ವ್ಯಾಹೃತಿಗಳ ವಿವರಣ ರೂಪವಾಗಿರುವುದಲ್ಲದೆ, ಕ್ರಮವಾಗಿ ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳ ಸಾರರೂಪವಾಗಿವೆಯೆಂದು ಛಾಂದೋಗ್ಯೋಪನಿಷತ್ತಿನಲ್ಲಿ ನಿರೂಪಿತವಾಗಿದೆ. (೨ ಅ. ೨೫ ಖಂ) ಅಷ್ಟೇ ಅಲ್ಲದೆ ಗಾಯತ್ರಿಯ ಈ ಮೂರು ಪಾದಗಳ ವ್ಯಾಖ್ಯಾನ ಅಥವಾ ವಿಸ್ತರಣೆಯೇ ಪುರುಷಸೂಕ್ತದ ಮೂರು ವರ್ಗಗಳಾಗಿ ರೂಪುಗೊಂಡಿದೆಯೆಂದು ಶ್ರೀಮಜ್ಜಯತೀರ್ಥರು ನ್ಯಾಯ

ಸುಧಾದಲ್ಲಿ 'ಬ್ರಹ್ಮ' ಶಬ್ದಾರ್ಥವನ್ನು ವಿಸ್ತರಿಸುವಾಗ ಹೇಳಿದ್ದಾರೆ —''ವರ್ಗತ್ರಯಾತ್ಮಕಸ್ಯ ತಸ್ಯ ತ್ರಿಪಾದ ಗಾಯತ್ರೀವ್ಯಾಖ್ಯಾನತ್ವೇನ 'ತದ್ವೇದಃ ಪೌರುಷಂ ಸೂಕ್ತಂ' ಇತ್ಯಾದ್ಯಾಗಮಸಿದ್ಧತ್ವಾತ್''

ಇದನ್ನೇ 'ಪ್ರಣವಾರ್ಥಾ ವ್ಯಾಹೃತಯೋ ವ್ಯಾಹೃತ್ಯರ್ಥಾ ಋಗಾದಯಃ' ಎಂದು ಸ್ಮೃತಿಯೂ ಹೇಳುತ್ತದೆ. ಮುಂದೆ 'ವೇದಾಃ ಪುರುಷಸೂಕ್ತಗಾಃ' ಎಂಬ ಸ್ಮೃತಿಯು (ತಂತ್ರಸಾರ, ೧ಅ. ೧೫ ಶ್ಲೋ) ಪುರುಷಸೂಕ್ತದ ಮೂರು ವರ್ಗಗಳ ವ್ಯಾಖ್ಯಾನವೇ ಋಗ್ವೇದ, ಯಜುರ್ವೇದ, ಸಾಮವೇದಗಳಾಗಿವೆಯೆಂದೂ ಅಲ್ಲೇ ಉಕ್ತವಾಗಿದೆ. ಆದ್ದರಿಂದಲೇ ಶ್ರೀಮದಾಚಾರ್ಯರು ಗಾಯತ್ರೀಗೆ 'ವೇದ ಮಾತಾ ತು ಗಾಯತ್ರೀ' ಎಂಬ ವಿಶೇಷಣ ಕೊಟ್ಟರು (೧ ಅ. ೧೪ ಶ್ಲೋ).

97. ಗಾಯತ್ರಿಯು ಎರಡು ಪ್ರಕಾರವಾಗಿದೆ:—ಗಾಯತ್ರೀ ಮಂತ್ರದ ಋಷಿಗಳೇ ಎರಡು ಪ್ರಕಾರವಾಗಿರುವುದರಿಂದ ಗಾಯತ್ರಿಯೂ ಮುಖ್ಯವಾಗಿ ಎರಡು ಪ್ರಕಾರವಾಗಿದೆ. ಗಾಯತ್ರೀಮಂತ್ರದ ಋಷಿಗಳಾರು ಎಂಬುದನ್ನು ಸ್ಪಷ್ಟಪಡಿಸುತ್ತಾ ಶ್ರೀಮದಾಚಾರ್ಯರು ತಂತ್ರಸಾರದಲ್ಲಿ (೧ ಅ. ೪ ಶ್ಲೋ) ಹೀಗೆ ಹೇಳಿದ್ದಾರೆ—

'ವಿಶ್ವಾಮಿತ್ರಸ್ತು ಸಂಧ್ಯಾರ್ಥೇ ತದನ್ಯತ್ರ ಪ್ರಜಾಪತಿಃ'

ಇದಕ್ಕೆ ಸಂಧ್ಯಾಗಾಯತ್ರಿಗೆ ವಿಶ್ವಾಮಿತ್ರರು ಋಷಿಗಳೆಂದೂ, ಮಿಕ್ಕ ಗಾಯತ್ರೀಗೆಲ್ಲಾ ಪ್ರಜಾಪತಿಯೆಂಬ ಚತುರ್ಮುಖ ಬ್ರಹ್ಮದೇವರೇ ಋಷಿಗಳು ಎಂಬುದು ಸಾಮಾನ್ಯಾರ್ಥ. ಅದರಂತೆ ಗಾಯತ್ರಿಯು 'ವಿಶ್ವಾಮಿತ್ರ ಗಾಯತ್ರಿ'ಯೆಂದೂ 'ಬ್ರಹ್ಮ ಗಾಯತ್ರೀ' ಎಂದೂ ಎರಡು ವಿಧವಾಗಿದೆಯೆಂದು ಹೇಳಿದಂತಾಯಿತು.

98. ವಿಶ್ವಾಮಿತ್ರ ಗಾಯತ್ರಿಯ ವಿಚಾರ—ನಾವು ತ್ರಿಕಾಲದಲ್ಲೂ ಮಾಡುವ ಸಂಧ್ಯಾವಂದನೆಗಳಲ್ಲಿ ಉಪಯೋಗಿಸುವ ಮಂತ್ರವೇ ವಿಶ್ವಾಮಿತ್ರ ಗಾಯತ್ರೀ; ಆದ್ದರಿಂದ ಇದನ್ನೇ 'ಸಂಧ್ಯಾ ಗಾಯತ್ರೀ' ಎಂದೂ ಕರೆಯುವುದು ರೂಢಿಯಾಗಿದೆ. ವಿಶ್ವಾಮಿತ್ರ ಗಾಯತ್ರಿಯಲ್ಲಿ ಗಾಯತ್ರೀಮಂತ್ರದ ಜೊತೆ ಪ್ರಣವವನ್ನೂ (ಓಂಕಾರವನ್ನೂ) ವ್ಯಾಹೃತಿತ್ರಯವನ್ನೂ ಸೇರಿಸಿಹೇಳಿಕೊಳ್ಳುತ್ತೇವೆ. ಹೀಗೆ ವಿಶ್ವಾಮಿತ್ರ ಗಾಯತ್ರೀ ಅಥವಾ ಸಂಧ್ಯಾಗಾಯತ್ರೀ ಮಂತ್ರವು ಪಂಚಸಂಧಿಗಳುಳ್ಳದ್ದಾಗಿದೆ—ಈ ಸಂಧಿಗಳನ್ನು ಒಂದಕ್ಕೊಂದು ಸೇರಿಸದಂತೆ ಬೇರೆ ಬೇರೆಯಾಗಿ ಬಿಡಿಸಿಯೇ ಉಚ್ಚರಿಸಬೇಕು. ಅಕಸ್ಮಾತ್ ಬೆರೆಸಿ ಉಚ್ಚರಿಸಿದರೆ ಬ್ರಹ್ಮಹತ್ಯಾದಿ ಪಂಚಮಹಾಪಾತಕ ಮಾಡಿದ ದೋಷವೇ ಬರುತ್ತದೆಂದು ಸಂಧ್ಯಾಭಾಷ್ಯದಲ್ಲಿ ಹೇಳಿದೆ. ಆ ಪಂಚಸಂಧಿಗಳು ಯಾವುವೆಂದರೆ—೧. ಓಂ, ೨.

ಭೂರ್ಭುವಸ್ಸುವಃ ಅಥವಾ ಭೂರ್ಭುವಸ್ಸ್ವಃ, ೩. ತತ್ ಸವಿತುರ್ ವರೇಣ್ಯಂ, ೪. ಭರ್ಗೋ ದೇವಸ್ಯ ಧೀಮಹಿ, ೫. ಧಿಯೋ ಯೋ ನಃ ಪ್ರಚೋದಯಾತ್ — ಹೀಗೆ ಐದು ಭಾಗವಾಗಿ ಬಿಡಿಸಿಯೇ ಹೇಳಬೇಕು. ಅನೇಕರು ಇದು ತಿಳಿಯದೆ ಓಂಭೂರ್ ಎಂದೋ ಓಂ ಭೂರ್ಭುವಃ ಎಂದೋ ಸೇರಿಸಿ ಹೇಳುವರು, ಆದರಿಂದ ಬ್ರಹ್ಮಹತ್ಯಾದಿ ದೋಷಗಳೇ ಬರುವುದು — ಪುಣ್ಯ ಬರುವುದಂತೂ ದೂರ ಹೋಯಿತು. ಇನ್ನೂ ಅನೇಕರು ತತ್ಸವಿತುರ್ ಎಂಬುದಕ್ಕೆ ಮೊದಲು ಓಂಕಾರ ಸೇರಿಸಿ 'ಓಂ ತತ್ಸವಿತುರ್' ಎಂದೂ ಹೇಳುವುದುಂಟು; ಆದರೆ ಅದೂ ಶುದ್ಧ ಅಪದ್ಧ; ಅದೂ ಪಂಚ ಸಂಧಿಗೆ ಭಂಗ ಮಾಡಿದಂತಾಗುತ್ತದೆ, ಆದ್ದರಿಂದ ತಪ್ಪೇ ಆಗುತ್ತದೆ. ವಿಶ್ವಾಮಿತ್ರರು ಗಾಯತ್ರೀಗೆ ಪ್ರಣವವನ್ನೂ ವ್ಯಾಹೃತಿಗಳನ್ನೂ ಸೇರಿಸಿ ಜಪಿಸಿಯೇ ಸಿದ್ಧಿ ಪಡೆದು ಸಂಧ್ಯಾಗಾಯತ್ರೀಗೆ 'ಋಷಿ'ಗಳೇ ಆದರು, ಆದ್ದರಿಂದ ನಾವೆಲ್ಲರೂ ಸಂಧ್ಯಾವಂದನ ಕಾಲದಲ್ಲಿ ವಿಶ್ವಾಮಿತ್ರ ಗಾಯತ್ರಿಯನ್ನೇ ಹೇಳಿ ಅರ್ಘ್ಯವನ್ನೂ ಜಪವನ್ನೂ ಮಾಡುವೆವು. ಜಪ ಮಾಡುವಾಗ ಪ್ರಾರಂಭದಲ್ಲಿ ಮಾತ್ರ ಇನ್ನೊಂದು ಓಂಕಾರವನ್ನು ಸೇರಿಸಬೇಕೆಂದು ಹೇಳಿದೆ; ಇದು 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಸಾಧಾರಣ ನಿಯಮಕ್ಕೆ — ಪ್ರಾರಂಭದಲ್ಲೂ ಕಡೆಯಲ್ಲೂ ಓಂಕಾರ ಸೇರಿಸಿಯೇ ಎಲ್ಲಾ ವೇದಮಂತ್ರಗಳನ್ನೂ ಹೇಳಬೇಕೆಂಬುದಕ್ಕೆ— ಅಪವಾದವಾಗಿದೆಯೆಂದು ತಿಳಿಯಬೇಕು. ಆದ್ದರಿಂದ ಅರ್ಘ್ಯ ಕೊಡುವಾಗ — ಓಂ, ಭೂರ್ಭುವಸ್ಸುವಃ, ತತ್ಸವಿತುರ್ ವರೇಣ್ಯಂ, ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್ ಎಂದು ಹೇಳಿಕೊಂಡರೂ ಜಪ ಮಾಡುವಾಗ ಮಾತ್ರ ಓಂ ಓಂ, ಭೂರ್ಭುವಸ್ಸುವಃ... ಪ್ರಚೋದಯಾತ್, ಓಂ ಓಂ, ಭೂರ್ಭುವಸ್ಸುವಃ... ಪ್ರಚೋದಯಾತ್ ಎಂದೇ ಸಂಧ್ಯಾಗಾಯತ್ರೀ ಜಪ ಮಾಡಬೇಕೆಂದು 'ಸಂಧ್ಯಾ ಭಾಷ್ಯ'ದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಇದನ್ನು ಎಲ್ಲರೂ ಅತ್ಯವಶ್ಯವಾಗಿ ಗಮನಿಸತಕ್ಕದ್ದು.

99. ಬ್ರಹ್ಮ ಗಾಯತ್ರೀ ಮಹಾಮಂತ್ರ: — ಪ್ರಣವವಾಗಲಿ ವ್ಯಾಹೃತಿಗಳಾಗಲಿ ತದಂಗವಾಗಿ ಸೇರದೇ ಇರುವ–ತತ್ಸವಿತುರ್ ಎಂದೇ ಆರಂಭವಾಗುವುದೇ ಬ್ರಹ್ಮ ಗಾಯತ್ರೀ. ಇದರಲ್ಲಿ ಎಂಟೆಂಟು ಅಕ್ಷರಗಳ ಮೂರು ಪಾದಗಳಿರುತ್ತವೆ. ಇವೇ ಅಷ್ಟ ಮಹಾಮಂತ್ರಗಳಲ್ಲಿ ಒಂದಾದ ಬ್ರಹ್ಮಗಾಯತ್ರೀ ಮಹಾಮಂತ್ರ. ಇದಕ್ಕೆ ವಿಶ್ವಾಮಿತ್ರ ಗಾಯತ್ರೀಗೆ ಇರುವಂತೆ ನಾರಾಯಣಾಷ್ಟಕ್ಷರ ಮಂತ್ರದ ಬಂಧನವೂ ಇಲ್ಲ — ಇಷ್ಟೇ ಜಪ ಮಾಡಬೇಕೆಂಬ ನಿರ್ಬಂಧವೂ ಇಲ್ಲ. ಈ ಮಂತ್ರಕ್ಕೆ 'ಪ್ರಜಾಪತಿ' ಎಂಬ ಹೆಸರುಳ್ಳ ಚತುರ್ಮುಖ ಬ್ರಹ್ಮದೇವರೇ ಋಷಿಗಳು.

**100. ದೇವತಾ ವಿಚಾರ:** — ಯದ್ಯಪಿ ಗಾಯತ್ರೀ ಎಂಬ ಶಬ್ದವು ಸ್ತ್ರೀಲಿಂಗ ಶಬ್ದವಾದರೂ ಅದಕ್ಕೆ ಸವಿತೃನಾಮಕನಾದ ಶ್ರೀಹರಿಯೇ (ನಾರಾಯಣನೇ) ದೇವತೆ—ಗಾಯತ್ರಿಯ ಪ್ರಥಮ ಚರಣದಲ್ಲೇ ಬಂದಿರುವ 'ಸವಿತುಃ' ಎಂಬ ಶಬ್ದವೇ ಇದನ್ನು ತೋರಿಸುತ್ತದೆ. 'ತಪನಃ ಸವಿತಾ ರವಿಃ' ಎಂದು ಅಮರದಲ್ಲಿ ಸವಿತೃ ಶಬ್ದವು ಸೂರ್ಯನ ಹೆಸರೆಂದು ಹೇಳಿದ್ದರೂ ಮಹಾವಿದ್ವದ್ರೂಢಿಯಿಂದ ಸವಿತೃ ಶಬ್ದವೇ ವಿಷ್ಣುವಾಚಕವಾಗಿದೆಯೆಂದು ತಂತ್ರಸಾರದಲ್ಲಿ ಸ್ಪಷ್ಟಪಡಿಸಿದೆ —

'ದೇವಸ್ತು ಸವಿತೃ–ನಾಮಾ ಸೃಷ್ಟ್ಯುತ್ವತೋ ಹರಿಃ (೧ ಅ. ೩೯ ಶ್ಲೋ)

ಸವಿತೃ ಶಬ್ದವು ಸೃಷ್ಟಿಕರ್ತನೆಂಬ ಅರ್ಥ ಕೊಡುವುದರಿಂದ ಗಾಯತ್ರೀ ಪ್ರತಿಪಾದ್ಯನಾದ ದೇವತೆ ಸೃಷ್ಟಿಕರ್ತನಾದ ನಾರಾಯಣನೇ ಹೊರತು ಸೂರ್ಯನಲ್ಲ. ಈ ವಿಚಾರವನ್ನು ಶ್ರೀಮದಾಚಾರ್ಯರು ಐತರೇಯ ಭಾಷ್ಯದಲ್ಲೂ (೨ನೇ ಆರ, ೨ ಅಧ್ಯಾ ಖಂ ೧) ಬ್ರಹ್ಮಸೂತ್ರ ಭಾಷ್ಯದಲ್ಲೂ (೧।೧।೨೫–೨೭) ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ.

ಗಾಯತ್ರಿಯು ಹೆಣ್ಣು ದೇವತೆಯಲ್ಲ: — ಲೋಕದಲ್ಲಿ ಪಾಮರ ಜನಗಳಲ್ಲಿ ಗಾಯತ್ರೀ ಎಂಬುವಳು ದೇವೀ—ಹೆಣ್ಣು ದೇವತೆಯೆಂದು ಬಹಳ ಪ್ರಸಿದ್ಧಿಯಿದ್ದರೂ, ಅಲ್ಲದೆ ಗಾಯತ್ರೀ ದೇವಿಯ ಹೆಂಗಸಿನ ಚಿತ್ರಪಟಗಳು ಮಾರಾಟವಾಗುತ್ತಿರುವುದೂ ಬಳಕೆಯಲ್ಲಿದ್ದರೂ ಕೂಡ ಗಾಯತ್ರೀ ಪ್ರತಿಪಾದ್ಯನಾದವನು ನಾರಾಯಣನೇ ಎಂಬುದಕ್ಕೆ ಗಾಯತ್ರೀ ಮಂತ್ರವೇ ಬೇಕಾದಷ್ಟು ಪುರಾವೆ(ಯುಕ್ತಿ)ಗಳನ್ನು ಒದಗಿಸುತ್ತದೆ. ೧. ಪ್ರಥಮಪಾದದಲ್ಲಿ 'ಸವಿತುಃ' ಎಂಬ ಪುಲ್ಲಿಂಗ ಶಬ್ದವು ಅವನು ಗಂಡಸೆಂದೇ ಹೇಳುತ್ತದೆ. ಹೆಂಗಸಾಗಿದ್ದಿದ್ದರೆ 'ಸಾವಿತ್ರೀ' ಎಂದೂ ಸಾವಿತ್ರ್ಯಾಃ ಎಂದೂ ಆಗಬೇಕಾಗಿತ್ತು. ೨. ಎರಡನೇ ಪಾದದಲ್ಲಿರುವ 'ದೇವಸ್ಯ' ಎಂಬ ಪುಲ್ಲಿಂಗ ರೂಪವೂ ಗಂಡಸೆಂದೇ ನಿರ್ಧರಿಸುತ್ತದೆ. ಅದು ಹೆಂಗಸಾಗಿದ್ದರೆ 'ದೇವ್ಯಾಃ' ಎಂದಿರಬೇಕಾಗಿತ್ತಲ್ಲವೇ? ನೀವೇ ಯೋಚಿಸಿ ನೋಡಿ. ೩. ಮೂರನೇ ಪಾದದಲ್ಲಿ 'ಧಿಯೋ ಯೋ ನಃ' ಎಂದಿದೆ. ಇಲ್ಲಿರುವ ಎರಡನೇ 'ಯಃ' ಎಂಬುದೂ ಪುಲ್ಲಿಂಗ ಶಬ್ದವೇ ಆಗಿದೆ. ಹೆಂಗಸಾಗಿದ್ದರೆ 'ಯಾ' ಎಂದಿರಬೇಕಾಗಿತ್ತು. ಹೀಗೆ ಆದಿಯಲ್ಲೂ ಮಧ್ಯದಲ್ಲೂ ಅಂತ್ಯದಲ್ಲೂ ಗಾಯತ್ರೀಮಂತ್ರದಲ್ಲೇ ಪುಲ್ಲಿಂಗ ಪ್ರಯೋಗಗಳೇ ಇರುವುದರಿಂದ ಗಾಯತ್ರೀ ಪ್ರತಿಪಾದ್ಯನು ಹೆಂಗಸಲ್ಲ ಎಂಬುದು ಖಚಿತವಾಗಿ ಸಿದ್ಧವಾಗುತ್ತದೆ. ಇದರ ಜೊತೆಗೆ ಶ್ರೀಮದಾಚಾರ್ಯರು ಐತರೇಯ ಭಾಷ್ಯದಲ್ಲೂ ಸದಾಚಾರಸ್ಮೃತ್ಯಾದಿ ಅನೇಕ ಗ್ರಂಥಗಳಲ್ಲಿ ಹೇಳಿರುವ ಪ್ರಮಾಣಗಳಿಂದಲೂ ನರಸಿಂಹಪುರಾಣದ 'ಧ್ಯೇಯಃ ಸದಾ ಸವಿತೃಮಂಡಲ ಮಧ್ಯವರ್ತೀ ನಾರಾಯಣಃ' ಎಂಬ ಧ್ಯಾನ ಶ್ಲೋಕದಿಂದಲೂ ಗಾಯತ್ರೀ ಪ್ರತಿಪಾದ್ಯನು ನಾರಾಯಣನೆಂದೇ ಸಿದ್ಧವಾಗುತ್ತದೆ.

**101. ಗಾಯತ್ರಿಯು ದಶಾವತಾರ ವಾಚಕ:** — ಗಾಯತ್ರೀ ಮಂತ್ರದಲ್ಲಿ ಇಪ್ಪತ್ತನಾಲ್ಕು ವರ್ಣಗಳಿದ್ದರೂ ಅದರಲ್ಲಿ ಎಣಿಸಿದಂತೆ ಹತ್ತೇ ಪದಗಳಿವೆ — ೧. ತತ್, ೨. ಸವಿತುಃ, ೩. ವರೇಣ್ಯಮ್, ೪. ಭರ್ಗಃ, ೫. ದೇವಸ್ಯ, ೬ ಧೀಮಹಿ, ೭. ಧಿಯಃ, ೮. ಯಃ, ೯. ನಃ, ೧೦. ಪ್ರಚೋದಯಾತ್, ಈ ಹತ್ತು ಪದಗಳು ಕ್ರಮವಾಗಿ ಮತ್ಸ್ಯ-ಕೂರ್ಮ-ವರಾಹಾದಿ ವಿಷ್ಣುವಿನ ದಶಾವತಾರಗಳನ್ನೇ ಹೇಳುತ್ತವೆ. ಈ ರೀತಿಯಿಂದಲೂ ಗಾಯತ್ರಿಯು ನಾರಾಯಣಪ್ರತಿಪಾದಕ ಎಂದು ಸಿದ್ಧವಾಗುತ್ತದೆ. (ಗಾಯತ್ರೀ ಮಂತ್ರಾರ್ಥವನ್ನು ಮುಂದೆ ಹೇಳುವೆವು)

**102. ಕೇಶವಾದಿ ರೂಪಗಳೇ ವರ್ಣದೇವತೆಗಳು:** — ಗಾಯತ್ರೀ ಮಂತ್ರದಲ್ಲಿರುವ ಇಪ್ಪತ್ತನಾಲ್ಕು ವರ್ಣಗಳಿಗೆ ವಿಷ್ಣುವಿನ ಕೇಶವಾದಿ ಚತುರ್ವಿಂಶತಿ ಮೂರ್ತಿಗಳೇ ವಾಚ್ಯದೇವತೆಗಳಾಗಿದ್ದಾರೆ ಎಂದು ತಂತ್ರಸಾರ ಹೇಳುತ್ತದೆ ( ಅ. ೧, ಶ್ಲೋ. ೧೫)

**ಚತುರ್ವಿಂಶನ್ಮೂರ್ತಯೋಽಸ್ಯಾಃ ಕಥಿತಾ ವರ್ಣದೇವತಾಃ॥**

(ಅರ್ಥ) ಅಸ್ಯಾಃ — ಈ ಗಾಯತ್ರೀಗೆ, ಚತುರ್ವಿಂಶನ್ಮೂರ್ತಯಃ-ವಿಷ್ಣುವಿನ ಕೇಶವ-ನಾರಾಯಣಾದಿ ಇಪ್ಪತ್ತನಾಲ್ಕು ಮೂರ್ತಿಗಳೇ, ವರ್ಣ ದೇವತಾಃ — ಅಕ್ಷರದಿಂದ ಪ್ರತಿಪಾದ್ಯ (ವಾಚ್ಯ) ಮೂರ್ತಿಗಳಾಗಿವೆ. ಇದರಿಂದಲೂ ಗಾಯತ್ರಿಯು ನಾರಾಯಣವಾಚಕ, ಹೆಂಗಸಲ್ಲ ಎಂದು ಸಿದ್ಧವಾಗುತ್ತದೆ. ಗಾಯತ್ರೀ ಮಂತ್ರದ ವರ್ಣಗಳಿಂದಲೂ ತತ್ಪ್ರತಿಪಾದ್ಯ ಕೇಶವಾದಿ ಚತುರ್ವಿಂಶತಿ ಮೂರ್ತಿಗಳಿಂದಲೂ ನಮ್ಮ ದೇಹದಲ್ಲಿ ನ್ಯಾಸ ಮಾಡಿಕೊಳ್ಳಬೇಕೆಂದು ಮುಂದೆ ವರ್ಣನ್ಯಾಸ ವಿಧಾನದಲ್ಲಿ ಬರುವುದು.

**103. ಅಂಗನ್ಯಾಸ ವಿಚಾರ:** — ಬ್ರಹ್ಮ ಗಾಯತ್ರೀ ಮಹಾಮಂತ್ರಕ್ಕೆ ಅಂಗ ನ್ಯಾಸ-ಕರನ್ಯಾಸಗಳನ್ನು ಹೇಗೆ ಮಾಡಿಕೊಳ್ಳಬೇಕೆಂಬುದನ್ನು ತಂತ್ರಸಾರದಲ್ಲಿ (೧ ಅ. ೪೧)ಹೀಗೆ ಹೇಳಿದೆ —

**ಸತಾರಾಶ್ಚ ವ್ಯಾಹೃತಯೋ ಗಾಯತ್ರ್ಯಂಗಾನಿ ಪಂಚ ಚ।**

(ಅರ್ಥ) ಸತಾರಾಃ ಚ-ಪ್ರಣವಸಹಿತವಾದ, ವ್ಯಾಹೃತಯಃ-ಭೂರಾದಿ ನಾಲ್ಕು ವ್ಯಾಹೃತಿಗಳೇ, ಗಾಯತ್ರ್ಯಂಗಾನಿ ಪಂಚ ಚ-ಬ್ರಹ್ಮಗಾಯತ್ರೀ ಮಂತ್ರದ ಪಂಚಾಂಗ ನ್ಯಾಸಗಳು. ವ್ಯಾಹೃತಿ ಮಂತ್ರಗಳಿಗೂ ಇದೇ ಕ್ರಮ ಹೇಳಿದ್ದರಿಂದ ವ್ಯಾಹೃತಿ ಮಂತ್ರದ ಅಂಗನ್ಯಾಸ-ಕರನ್ಯಾಸ ಕ್ರಮವೇ ಇದಕ್ಕೂ ಅನ್ವಯಿಸುತ್ತದೆ. ಹೇಗೆಂದರೆ —

| ಕ್ರಮ | ಮಂತ್ರ | ಕರನ್ಯಾಸ | ಅಂಗನ್ಯಾಸ |
|---|---|---|---|
| ೧ | ಓಂ ಓಂ ನಾರಾಯಣಾಯ | ಅಂಗುಷ್ಠಾಭ್ಯಾಂ ನಮಃ | ಹೃದಯಾಯ ನಮಃ |
| ೨ | ಓಂ ಭೂಃ ವಾಸುದೇವಾಯ | ತರ್ಜನೀಭ್ಯಾಂ ನಮಃ | ಶಿರಸೇ ಸ್ವಾಹಾ |
| ೩ | ಓಂ ಭುವಃ ಸಂಕರ್ಷಣಾಯ | ಮಧ್ಯಮಾಭ್ಯಾಂ ನಮಃ | ಶಿಖಾಯೈ ವಷಟ್ |
| ೪ | ಓಂ ಸ್ವಃ ಪ್ರದ್ಯುಮ್ನಾಯ | ಅನಾಮಿಕಾಭ್ಯಾಂ ನಮಃ | ಕವಚಾಯ ಹುಮ್ |
| ೫ | ಓಂ ಭೂರ್ಭುವಸ್ಸುವಃ ಅನಿರುದ್ಧಾಯ | ಕನಿಷ್ಠಿಕಾಭ್ಯಾಂ ನಮಃ | ಅಸ್ತ್ರಾಯ ಫಟ್ |

ಓಂ ಭೂರ್ಭುವಸ್ಸುವರೋಮ್ ಇತಿ ದಿಗ್ಬಂಧಃ (ದಿಙ್ಮುಖಃ)

**104. ಕೇಶವಾದಿ ಮೂರ್ತಿಗಳ ಧ್ಯಾನ:** — ಅಂಗನ್ಯಾಸ ಮಾಡಿಕೊಂಡ ಮೇಲೆ ವರ್ಣನ್ಯಾಸ ಮಾಡಿಕೊಳ್ಳಬೇಕು. ಗಾಯತ್ರೀ ಮಂತ್ರದ ಇಪ್ಪತ್ತನಾಲ್ಕು ವರ್ಣಗಳಿಗೆ (ಖಂಡ 102) ಕೇಶವಾದಿ ಚತುರ್ವಿಂಶತಿ ಮೂರ್ತಿಗಳೇ ವಾಚ್ಯದೇವತೆಗಳು, ವರ್ಣನ್ಯಾಸದಲ್ಲಿ ಆಯಾ ಮೂರ್ತಿಸ್ಮರಣಪೂರ್ವಕ ಆಯಾ ವರ್ಣಗಳನ್ನು ಕ್ಲುಪ್ತಸ್ಥಾನಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕು. ಅದಕ್ಕೆ ಮುಂಚೆ 'ನ್ಯಸನೀಯಂ ಚ ತದ್ವರ್ಣ–ದೇವತಾ ಧ್ಯಾನ ಪೂರ್ವಕಮ್' ಎಂದು ಪ್ರಣವಮಂತ್ರಕ್ಕೆ ಹೇಳಿದಂತೆ (ಅ. ೧। ೩೩ ಶ್ಲೋ) ಈಗ ಗಾಯತ್ರೀ ವರ್ಣಗಳಿಗೆ ದೇವತೆಗಳಾದ ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಧ್ಯಾನಮಾಡಬೇಕು.. ವಾಸುದೇವದ್ವಾದಶಾಕ್ಷರ ಮಂತ್ರದ ನಿರೂಪಣೆಯಲ್ಲೇ ಈ ಕೇಶವಾದಿ ದ್ವಾದಶ ಮೂರ್ತಿಗಳ ನಿರೂಪಣೆ ಬಂದಿದೆ. (ಪೀಠಿಕೆಯಲ್ಲಿ 87ನೇ ಖಂಡ). ಆ ವಿಷಯಗಳೆಲ್ಲವೂ ಇದಕ್ಕೂ ಅನ್ವಯಿಸುತ್ತವೆ. ಇದು ಅದರಿಂದ ಮುಂದಿನದು ಅಷ್ಟೇ.

(ಕೇಶವಾದಿ ದ್ವಾದಶ ಮೂರ್ತಿಗಳನ್ನು ಅಲ್ಲೇ ಕೊಟ್ಟಿದೆಯಾದ್ದರಿಂದ ಇಲ್ಲಿ ಪುನಃ ಕೊಟ್ಟಿಲ್ಲ) ಸಂಕರ್ಷಣನಿಂದ ಮುಂದಿನ ಹನ್ನೆರಡು ಮೂರ್ತಿಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ —

೧೩. ಶಂಖಾಬ್ಜಾರಿ[1]–ಗದೀ ಸೂರ್ಯ — ಪ್ರಭಃ ಸಂಕರ್ಷಣೋ ವಿಭುಃ।
೧೪. ಶಂಖಿಚಕ್ರೀ ಕಂಜ[2]–ಗದೀ ವಾಸುದೇವೋ ರವಿಪ್ರಭಃ॥
೧೫. ಪ್ರದ್ಯುಮ್ನೋ ರವಿಭಾಃ[3], ಶಂಖ — ಗದಾಬ್ಜಾರಿಧರೋ ಹರಿಃ॥
೧೬. ಅನಿರುದ್ಧೋ ಗದಾ–ಶಂಖ — ಪದ್ಮ-ಚಕ್ರೀ ರವಿಪ್ರಭಃ ॥
೧೭. ಪದ್ಮ–ಶಂಖ–ಗದಾ –ಚಕ್ರೀ ಸೂರ್ಯಾಭಃ ಪುರುಷೋತ್ತಮಃ।
೧೮. ರವಿ ಪ್ರಭೋ ಗದಾ–ಶಂಖ — ಚಕ್ರಾಬ್ಜೀತೋ ಹ್ಯಧೋಕ್ಷಜಃ॥

1 ಅಬ್ಜ–ಕಮಲ, ಅರಿ–ಚಕ್ರ
2 ಕಂಜ–ಕಮಲ.
3 ಭಾಃ = ಪ್ರಕಾಶವುಳ್ಳವನು (ಭಾಶ್ಚವಿದ್ಯುತಿಡೀಪ್ತಯಃ–ಅಮರ)
4 ಉದ್ಯತ್– ಉದಯಿಸುತ್ತಿರುವ, ಅರ್ಕ–ಸೂರ್ಯನಿಗೆ, ನಿಭಃ – ಸಮಾನವಾದ ಕಾಂತಿಯುಳ್ಳ

೧೯. ಸೂರ್ಯಾಭೋ ನೃಹರಿಃ ಪದ್ಮ–ಗದಾ–ಶಂಖಾರಿ–ಸಂಯುತಃ।
೨೦. ಸೂರ್ಯಾಭೋಽಚ್ಯುತನಾಮಾಬ್ಜ–ಶಂಖ–ಚಕ್ರ– ಗದಾಯುತಃ॥
೨೧. ಜನಾರ್ದನಶ್ಚಕ್ರ–ಶಂಖ – ಗದಾಬ್ಜೇತೋ ರವಿದ್ಯುತಿಃ।
೨೨. ಉದ್ಯದರ್ಕ– ನಿಭೋ[4]ಪೇಂದ್ರೋ ಗದಾ–ಚಕ್ರಾಬ್ಜ–ಶಂಖ–ಯುಕ್॥
೨೩. ಸಾರಿ–ಪದ್ಮ ಗದಾ –ಶಂಖೋ ಹರಿಃ ಪ್ರೋದ್ಯದ್–ರವಿಪ್ರಭಃ।
೨೪. ಉದ್ಯದರ್ಕನಿಭಃ ಕೃಷ್ಣೋ ಗದಾ– ಪದ್ಮಾರಿ–ಶಂಖ–ಭೃತ್।

**105.** ಬ್ರಹ್ಮಗಾಯತ್ರೀಗೆ ವರ್ಣನ್ಯಾಸ: — ಬ್ರಹ್ಮಗಾಯತ್ರೀ ಮಂತ್ರದಲ್ಲಿ ಇಪ್ಪತ್ತನಾಲ್ಕು ವರ್ಣಗಳಿವೆ, ಅವುಗಳಿಗೆ ಕೇಶವಾದಿ ಚತುರ್ವಿಂಶತಿಮೂರ್ತಿಗಳು ವಾಚ್ಯದೇವತೆಗಳು. ಈ ಇಪ್ಪತ್ತನಾಲ್ಕು ವರ್ಣಗಳನ್ನು ಎಲ್ಲಿ ನ್ಯಾಸ ಮಾಡಿಕೊಳ್ಳಬೇಕೆಂದರೆ ಆ ಸ್ಥಾನಗಳನ್ನು ಹೇಳುತ್ತಾರೆ (ತಂತ್ರಸಾರ ೧ ಅ. ೪೩–೪೪ ಶ್ಲೋ.) —

> ದೋಃ ಪತ್ ಸಂಧಿಷು ಸಾಗ್ರೇಷು ನಾಭಿ–ಹೃನ್ಮುಖ–ಕೇಷು ಚ।
> ವರ್ಣನ್ಯಾಸಶ್ಚ ಕರ್ತವ್ಯಃ...

(ಅರ್ಥ) ದೋಃ ಎಂದರೆ ತೋಳು ಅಥವಾ ಬಾಹು 'ಭುಜ–ಬಾಹೂ ಪ್ರವೇಷ್ಟೋ ದೋಃ ಸ್ಯಾತ್' ಅಮರ. ಪತ್ ಎಂದರೆ ಪಾದಗಳು. ಎರಡು ತೋಳುಗಳ ಮತ್ತು ಎರಡು ಕಾಲುಗಳ, ಸಂಧಿಷು–ಕೀಲುಗಳಲ್ಲೂ ಮತ್ತು ಸಾಗ್ರೇಷು –ತುದಿಗಳಲ್ಲೂ (ಮಾತೃಕಾ ನ್ಯಾಸದಲ್ಲಿ ಕಕಾರದಿಂದ ನಕಾರದವರೆಗೆ ನ್ಯಾಸ ಮಾಡಿಕೊಳ್ಳುವಂತೆ) ಇಪ್ಪತ್ತು ಅಕ್ಷರಗಳನ್ನೂ, (ಕಡೆಯ ಪ್ರಚೋದಯಾತ್ ಎಂಬ ನಾಲ್ಕು ಅಕ್ಷರಗಳನ್ನು) ನಾಭಿ–ಹೃತ್–ಮುಖ–ಕೇಷು ಚ–ನಾಭಿಯಲ್ಲೂ ಹೃದಯದಲ್ಲೂ, ಮುಖದಲ್ಲೂ (ಬಾಯಿಯಲ್ಲೂ) ಶಿರಸ್ಸುಗಳಲ್ಲೂ, ವರ್ಣನ್ಯಾಸಶ್ಚ ಕರ್ತವ್ಯಃ — ವರ್ಣನ್ಯಾಸವನ್ನು ಮಾಡಿಕೊಳ್ಳಬೇಕೆಂದು ಹೇಳಿದರು. ಇಲ್ಲಿ ಕಡೆಯ ನಾಲ್ಕು ವರ್ಣಗಳಿಗೆ ಮಾತ್ರ ಲಯಕ್ರಮ ಹೇಳಿದರು. ಆದ್ದರಿಂದ ಮೊದಲ ಇಪ್ಪತ್ತು ವರ್ಣಗಳಿಗೆ ಸೃಷ್ಟ್ಯಾದಿಭೇದ ಇಲ್ಲವೆಂದು ಹೇಳಿದಂತಾಯಿತು ಕಡೆಯ ನಾಲ್ಕು ವರ್ಣಗಳಿಗೆ ಮಾತ್ರ ಸೃಷ್ಟ್ಯಾದಿ ಕ್ರಮದಿಂದ ಮಾಡಿಕೊಳ್ಳಬೇಕೆಂದು ಹೇಳಿದಂತಾಯಿತು. ಮೊದಲ ಇಪ್ಪತ್ತು ವರ್ಣಗಳಿಗೆ ಭಿನ್ನಕ್ರಮಗಳಿಲ್ಲವಾದ್ದರಿಂದ ಬ್ರಹ್ಮಗಾಯತ್ರೀಗೆ ವರ್ಣನ್ಯಾಸ ಎಲ್ಲರಿಗೂ ಒಂದೇ ಕ್ರಮವೆಂದೂ ಕಡೆಯ ನಾಲ್ಕು ವರ್ಣಗಳನ್ನು ಮಾತ್ರ ತಮ್ಮ ತಮ್ಮ ಆಶ್ರಮಕ್ಕೆ ತಕ್ಕ ಕ್ರಮದಲ್ಲಿ ಮಾಡಿಕೊಳ್ಳಬೇಕೆಂದು ಸೂಚಿಸಿದಂತಾಯಿತು. ಆದ್ದರಿಂದ ಆ ಕ್ರಮವನ್ನು ದಿಕ್ಪ್ರದರ್ಶನಾರ್ಥ ಕೆಳಗೆ ತೋರಿಸಿದೆ.

**106.** ವರ್ಣನ್ಯಾಸ ಕ್ರಮ–(ವಿವರಣೆ ಸಹಿತ): — (ಅ) ಬಲಗೈಯಿನ ತೋಳುಗಳ ನಾಲ್ಕು ಕೀಲುಗಳಲ್ಲಿ ಮತ್ತು ಬೆಟ್ಟುಗಳ ತುದಿಯಲ್ಲಿ ಎಡಗೈಯಿಂದ ಐದು ಬೆಟ್ಟುಗಳಿಂದ ನ್ಯಾಸ ಮಾಡಬೇಕು — ೧. ಓಂ ತಂ ಕೇಶವಾಯ ನಮಃ। ೨ ಓಂ

ತ್ಸಂ ನಾರಾಯಣಾಯ ನಮಃ। ೩. ವಂ ಮಾಧವಾಯ ನಮಃ।೪. ಓಂ ತುಂ ಗೋವಿಂದಾಯ ನಮಃ। ೫ ಓಂ ವಂ ವಿಷ್ಣವೇ ನಮಃ ।। (ಆ) ಎಡತೋಳಿನಲ್ಲಿ ಬಲಗೈಯಿಂದ ೬ ಓಂ ರೇಂ. ಮಧುಸೂದನಾಯ ನಮಃ। ೭. ಓಂ ಣಿಂ ತ್ರಿವಿಕ್ರಮಾಯ ನಮಃ। ೮ ಓಂ ಯಂ ವಾಮನಾಯಃ ನಮಃ। ೯. ಓಂ ಭಂ ಶ್ರೀಧರಾಯ ನಮಃ। ೧೦. ಓಂ ಗೋಂ ಹೃಷೀಕೇಶಾಯ ನಮಃ।। ಬಲಗಾಲಿನಲ್ಲಿ ಬಲಗೈಯಿಂದ— ೧೧ ಓಂ ದೇಂ ಪದ್ಮನಾಭಾಯ ನಮಃ। ೧೨. ಓಂ ವಂ ದಾಮೋದರಾಯ ನಮಃ। ೧೩. ಓಂ ಸ್ಯಂ ಸಂಕರ್ಷಣಾಯ ನಮಃ। ೧೪ ಓಂ ಧೀಂ ವಾಸುದೇವಾಯ ನಮಃ। ೧೫ ಓಂ ಮಂ ಪ್ರದ್ಯುಮ್ನಾಯ ನಮಃ। (ಈ) ಎಡಗಾಲಿನಲ್ಲಿ ಬಲಗೈಯಿಂದಲೇ—೧೬ ಓಂ ಹಿಂ ಅನಿರುದ್ಧಾಯ ನಮಃ। ೧೭. ಓಂ ಧಿಂ ಪುರುಷೋತ್ತಮಾಯ ನಮಃ। ೧೮ ಓಂ ಯೋಂ ಅಧೋಕ್ಷಜಾಯ ನಮಃ। ೧೯. ಓಂ ಯೋಂ ನಾರಸಿಂಹಾಯ ನಮಃ। ೨೦. ಓಂ ನಂ ಅಚ್ಯುತಾಯ ನಮಃ।। (ಮಿಕ್ಕ ನಾಲ್ಕಕ್ಕೆ) ಬ್ರಹ್ಮಚಾರಿಗಳ ಸೃಷ್ಟಿಕ್ರಮ—೨೧. ಓಂ ಪ್ರಂ ಜನಾರ್ದನಾಯ ನಮಃ (ಶಿರಸಿ) । ೨೨ ಓಂ ಚೋಂ ಉಪೇಂದ್ರಾಯ ನಮಃ (ಮುಖೇ)। ೨೩ ಓಂ ದಂ ಹರಯೇ ನಮಃ (ನಾಭೌ)। ೨೪. ಓಂ ಯಾತ್ (ಯಾಂ) ಶ್ರೀಕೃಷ್ಣಾಯ ನಮಃ (ಹೃದಯೇ)।।

**107.** ಅಂಗುಲಿನ್ಯಾಸ ವಿಧಾನ—ವರ್ಣನ್ಯಾಸ ವಿಧಾನ ಮಾಡುವಾಗ ತಂತ್ರಸಾರದಲ್ಲಿ (೧ ಅ. ೪೪ ಶ್ಲೋ) ' ವರ್ಣನ್ಯಾಸಶ್ಚ ಕರ್ತವ್ಯಃ) ' ಎಂದು ಹೇಳಿದ್ದಾರೆ. ಇಲ್ಲಿ ಚಕಾರದಿಂದ ಅಂಗುಲಿನ್ಯಾಸವು ವಿಹಿತವಾಯಿತು. ಎರಡು ಕೈಗಳ ತರ್ಜನ್ಯಾದಿ ನಾಲ್ಕು ಬೆರಳುಗಳಲ್ಲೂ ಮೂರು ಮೂರು ರೇಖೆಗಳಿರುವುವಷ್ಟೆ. ಹೀಗೆ ಒಂದೊಂದು ಕೈಗಳಲ್ಲೂ ಹನ್ನೆರಡು –ಹನ್ನೆರಡು ರೇಖೆಗಳಿವೆ. ಈ ರೇಖೆಗಳಲ್ಲಿ ಆಯಾ ಕೈಯಿನ ಹೆಬ್ಬೆಟ್ಟಿನಿಂದ ಗಾಯತ್ರೀ ವರ್ಣನ್ಯಾಸಗಳನ್ನು ನ್ಯಾಸ ಮಾಡಿಕೊಳ್ಳುತ್ತಾ ಹೋದರೆ ಎರಡು ಕೈಗಳಿಂದ ಸರಿಯಾಗಿ ಇಪ್ಪತ್ತನಾಲ್ಕು ವರ್ಣಗಳೂ ಚತುರ್ವಿಂಶತಿಮೂರ್ತಿಗಳು ಆಗಿಹೋಗುತ್ತಾರೆ. ಈ ನ್ಯಾಸವನ್ನು ಅಂಗುಲಿಗಳಲ್ಲಿ ಮಾಡಿಕೊಂಡಿದ್ದರಿಂದ ಇದಕ್ಕೆ ಅಂಗುಲಿನ್ಯಾಸ ಎಂದು ಹೆಸರಾಯಿತು.

ಬ್ರಹ್ಮಚಾರಿಗಳೂ ಗೃಹಸ್ಥರೂ ಇಬ್ಬರೂ ಮೊದಲು ಬಲಗೈ ರೇಖೆಗಳಲ್ಲಿ ತರ್ಜನ್ಯಾದಿಕ್ರಮದಿಂದಲೇ ಮೊದಲ ಹನ್ನೆರಡು ವರ್ಣಗಳನ್ನು ನ್ಯಾಸಮಾಡಿಕೊಳ್ಳಬೇಕು. ಎಡಗೈಯಲ್ಲಿ ಮಾಡಿಕೊಳ್ಳುವಾಗ ಬ್ರಹ್ಮಚಾರಿಗಳು ಕನಿಷ್ಠಿಕಾದಿಂದ (ಕಿರಿ ಬೆರಳಿಂದ) ತರ್ಜನಿಯವರೆಗೆ ಮಾಡಿಕೊಳ್ಳಬೇಕು—ಇದೇ ಸೃಷ್ಟಿಕ್ರಮ. ಗೃಹಸ್ಥರು ಅದೇ ವರ್ಣಗಳನ್ನೇ ತರ್ಜನಿಯಿಂದ ಆರಂಭಿಸಿ ಕನಿಷ್ಠಿಕಾದಲ್ಲಿ ಮುಗಿಸಬೇಕು—ಇದೇ ಸ್ಥಿತಿಕ್ರಮ. ಯತಿಗಳು ಮಾತ್ರ ಮೊದಲು ಎಡಗೈ ತರ್ಜನಿಯಿಂದ ಆರಂಭಿಸಿ ಬಲಗೈ ತರ್ಜನಿಯಲ್ಲಿ ಮುಗಿಸಬೇಕು—ಇದೇ ಲಯಕ್ರಮ. ಅಂಗುಲಿನ್ಯಾಸ ಎಲ್ಲರಿಗೂ ಒಂದು ಮಾತ್ರವೇ ಸಾಕು.

ಈಗ ಆ ಕ್ರಮವನ್ನು ತೋರಿಸಿದೆ. ನ್ಯಾಸ ಮಾಡಿಕೊಳ್ಳುವಾಗ ಕೆಳಗಿನಿಂದ ಮೇಲಕ್ಕೆ ತರಬೇಕೇ ವಿನಾ (ಆರೋಹಣ) ಮೇಲಿಂದ ಕೆಳಗೆ ಬರಬಾರದು.

ಗೃಹಸ್ಥರೂ ಬ್ರಹ್ಮಚಾರಿಗಳು ಇಬ್ಬರೂ—ಬಲಗೈ ತರ್ಜನೀ ಬೆಟ್ಟಿನ ಕೆಳರೇಖೆಯಿಂದ ಆರಂಭಿಸಿ ಮೇಲಕ್ಕೆ ಹೋಗಬೇಕು. ತರ್ಜನಿಯ ಮೂರು ರೇಖೆಗಳಲ್ಲಿ —೧. ಓಂ ತಂ ಕೇಶವಾಯ ನಮಃ। ೨. ಓಂ ತ್ಸಂ ನಾರಾಯಣಾಯ ನಮಃ। ೩. ಓಂ ವಿಂ ಮಾಧವಾಯನಮಃ। ಬಲಗೈ ನಡುಬೆಟ್ಟಿನ ರೇಖೆಗಳಲ್ಲಿ —೪ ಓಂ ತುಂ ಗೋವಿಂದಾಯ ನಮಃ। ೫. ಓಂ ವಂ ವಿಷ್ಣವೇ ನಮಃ ೬ ಓಂ ರೇಂ ಮಧುಸೂದನಾಯ ನಮಃ।। ಬಲಗೈ ಅನಾಮಿಕ ಬೆಟ್ಟಿನ ರೇಖೆಗಳಲ್ಲಿ —೭. ಓಂ ಣಿಂ ತ್ರಿವಿಕ್ರಮಾಯ ನಮಃ। ೮. ಓಂ ಯಂ ವಾಮಾನಾಯ ನಮಃ। ೯. ಓಂ ಭಂ ಶ್ರೀಧರಾಯ ನಮಃ।। ಬಲಗೈ ಕನಿಷ್ಠಿಕಾದ (ಕಿರಿಬೆಟ್ಟಿನ) ರೇಖೆಗಳಲ್ಲಿ —೧೦. ಓಂ ರ್ಗೋಂ ಹೃಷೀಕೇಶಾಯ ನಮಃ। ೧೧ ಓಂ ದೇಂ ಪದ್ಮನಾಭಾಯ ನಮಃ। ೧೨. ಓಂ ವಂ ದಾಮೋದರಾಯ ನಮಃ।।

ಮುಂದೆ ಬ್ರಹ್ಮಚಾರಿಗಳ ಸೃಷ್ಟಿಕ್ರಮ—ಎಡಗೈ ಕಿರಿಬೆರಳಿನ ಮೂರು ರೇಖೆಗಳಲ್ಲಿ —೧೩. ಓಂ ಸ್ಯಂ ಸಂಕರ್ಷಣಾಯ ನಮಃ। ೧೪. ಓಂ ಧೀಂ ವಾಸುದೇವಾಯ ನಮಃ।೫. ಓಂ ಮಂ ಪ್ರದ್ಯುಮ್ನಾಯ ನಮಃ।। ಎಡಗೈ ಅನಾಮಿಕಾ ಬೆಟ್ಟಿನ ಮೂರು ರೇಖೆಗಳಲ್ಲಿ —೧೬. ಓಂ ಹಿಂ ಅನಿರುದ್ಧಾಯ ನಮಃ। ೧೭. ಓಂ ಧಿಂ ಪುರುಷೋತ್ತಮಾಯ ನಮಃ। ೧೮. ಓಂ ಯೋಂ ಅಧೋಕ್ಷಜಾಯ ನಮಃ।। ಎಡಗೈ ನಡುಬೆಟ್ಟಿನಲ್ಲಿ ೧೯. ಓಂ ಯೋಂ ನಾರಸಿಂಹಾಯ ನಮಃ। ೨೦ ಓಂ ನಂ ಅಚ್ಯುತಾಯ ನಮಃ। ೨೧. ಓಂ ಪ್ರಂ ಜನಾರ್ದನಾಯ ನಮಃ।। ಎಡಗೈ ತರ್ಜನೀ ಬೆಟ್ಟಿನ ಮೂರು ರೇಖೆಗಳಲ್ಲಿ —೨೨. ಓಂ ಚೋಂ ಉಪೇಂದ್ರಾಯ ನಮಃ। ಓಂ ದಂ ಹರಯೇ ನಮಃ। ೨೪. ಓಂ ಯಾಂ (ಯಾತ್) ಶ್ರೀಕೃಷ್ಣಾಯ ನಮಃ।।

**ಗೃಹಸ್ಥರ ಸ್ಥಿತಿಕ್ರಮ**—ಎಡಗೈ ತರ್ಜನಿಯ ಮೂರು ರೇಖೆಗಳಲ್ಲಿ —೧೩. ಓಂ ಸ್ಯಂ ಸಂಕರ್ಷಣಾಯ ನಮಃ। ೧೪. ಓಂ ಧೀಂ ವಾಸುದೇವಾಯ ನಮಃ। ೧೫ ಓಂ ಯಂ ಪ್ರದ್ಯುಮ್ನಾಯ ನಮಃ।। ಎಡಗೈ ನಡುಬೆಟ್ಟಿನಲ್ಲಿ —೧೬. ಓಂ ಹಿಂ ಅನಿರುದ್ಧಾಯನಮಃ। ೧೭. ಓಂ ಧಿಂ ಪುರುಷೋತ್ತಮಾಯ ನಮಃ। ೧೮. ಓಂ ಯೋಂ ಅಧೋಕ್ಷಜಾಯ ನಮಃ।। ಎಡಗೈ ಅನಾಮಿಕಾದಲ್ಲಿ —೧೯. ಓಂ ಯೋಂ ನಾರಸಿಂಹಾಯ ನಮಃ। ೨೦. ಓಂ ನಂ ಅಚ್ಯುತಾಯ ನಮಃ। ೨೧. ಓಂ ಪ್ರಂ ಜನಾರ್ದನಾಯ ನಮಃ।। ಎಡಗೈ ಕಿರಿಬೆರಳಿನ ಮೂರು ರೇಖೆಗಳಲ್ಲಿ —೨೨. ಓಂ ಚೋಂ ಉಪೇಂದ್ರಾಯ ನಮಃ। ೨೩. ಓಂ ದಂ ಹರಯೇ ನಮಃ। ೨೪. ಓಂ ಯಾಂ (ಯಾತ್) ಶ್ರೀಕೃಷ್ಣಾಯ ನಮಃ।

ಸ್ವಲ್ಪ ಅಭ್ಯಾಸ ಮಾಡಿಕೊಂಡು ಗಮನಿಸಿದರೆ ವರ್ಣನ್ಯಾಸವನ್ನೂ ಅಂಗುಲಿನ್ಯಾಸವನ್ನೂ ಹೀಗೆ ಬರೆದುಕೊಂಡು ಅಭ್ಯಾಸ ಮಾಡಿದರೆ ಸುಲಭವಾಗುತ್ತದೆ—

ಬ್ರಹ್ಮಗಾಯತ್ರೀಮಂತ್ರ ವರ್ಣನ್ಯಾಸ ಅಂಗುಲಿನ್ಯಾಸಗಳ ಪಕ್ಷಿನೋಟ

| | ಬಲಗೈ ಕೀಲುಗಳಲ್ಲಿ | | | | | | ಎಡಗೈ ಕೀಲುಗಳಲ್ಲಿ | | | | ಬಲಗಾಲು | |
|---|---|---|---|---|---|---|---|---|---|---|---|---|
| ವರ್ಣಗಳು | ತಂ | ತ್ಸಂ | ವಿಂ | ತುಂ | ರ್ವಂ | ರೇಂ | ಣಿಂ | ಯಂ | ಭಂ | ರ್ಗೋಂ | ದೇಂ | ವಂ |
| ಮೂರ್ತಿಗಳು | ಕೇ | ನಾ | ಮಾ | ಗೋ | ವಿ | ಮಧು | ತ್ರಿ | ವಾ | ಶ್ರೀ | ಹೃ | ಪದ್ಮ | ದಾ |
| ಅಂಗುಲಿನ್ಯಾಸ | ಬಲಗೈ ತರ್ಜನಿ | | | ಬಲಗೈ ನಡುಬೆಟ್ಟು | | | ಬಲಗೈ ಅನಾಮಿಕಾ | | | ಬಲಗೈ ಕಿರಿಬೆಟ್ಟು | | |
| | | | | | | ಮುಂದುವರೆದದ್ದು | | | | | | |
| ವರ್ಣನ್ಯಾಸ | ಬಲಗಾಲು ಕೀಲುಗಳಲ್ಲಿ | | | ಎಡಗಾಲಿನ ಕೀಲುಗಳಲ್ಲಿ | | | ಸೃಷ್ಟಿ ಸ್ಥಿತಿ | | ಶಿರಸಿ 3 77 | ಮುಖೇ ಅಂಗ್ಯೆ 71 | ಹೃದಯೇ 1 + 5 ನಾಭೌ 2-5 | ಸ್ತಾಭ್ಯೌ / ಹೃದಯೆ 1 + 5 |
| ವರ್ಣಗಳು | ಸ್ಯಂ | ಧೀಂ | ಮಂ | ಹಿಂ | ಧಿಂ | ಯೋಂ | ಯೋಂ | ನಂ | ಪ್ರಂ | ಚೋಂ | ದಂ | ಯಾತ್ |
| ಮೂರ್ತಿಗಳು | ಸಂ | ವಾಸು | ಪ್ರ | ಅನಿ | ಪುರು | ಅಧೋ | ನಾರ | ಅಚ್ಯು | ಜನಾ | ಉಪೇಂ | ಹ | ಕೃ |
| ಅಂಗುಲಿನ್ಯಾಸ ಸೃಷ್ಟಿ ಸ್ಥಿತಿ | ಎಡಗೈ ತರ್ಜನೀ ಕಿರಿಬೆಟ್ಟು | | | ನಡುಬೆಟ್ಟು ಅನಾಮಿಕ | | | ಅನಾಮಿಕ ನಡುಬೆಟ್ಟು | | | ಕಿರಿಬೆಟ್ಟು ತರ್ಜನೀಬೆಟ್ಟು | | |

**108.** ಋಷ್ಯಾದಿನ್ಯಾಸ: — ಹಿಂದೆ ಖಂಡ 101ರಲ್ಲಿ ಹೇಳಿದಂತೆ ಬ್ರಹ್ಮಗಾಯತ್ರೀಗೆ ಪ್ರಜಾಪತಿನಾಮಕ ಬ್ರಹ್ಮದೇವರೇ ಋಷಿ; ಗಾಯತ್ರಿಯೇ ಛಂದಸ್ಸು. ಖಂಡ 100ರಲ್ಲಿ ನಿರೂಪಣೆ ಮಾಡಿದಂತೆ ಸವಿತೃನಾಮಕನಾದ ನಾರಾಯಣನೇ ದೇವತೆ. ಆದ್ದರಿಂದ ಋಷ್ಯಾದಿನ್ಯಾಸವನ್ನು ಹೀಗೆ ಹೇಳಿಕೊಂಡು ಮಾಡಬೇಕು —

**ಅಸ್ಯ ಶ್ರೀಬ್ರಹ್ಮಗಾಯತ್ರೀ ಮಹಾಮಂತ್ರಸ್ಯ ಚತುರ್ಮುಖ ಬ್ರಹ್ಮಾ ಪ್ರಜಾಪತಿಃ ಋಷಿಃ (ಶಿರಸಿ)। ದೇವೀ ಗಾಯತ್ರೀ ಛಂದ: (ಮುಖೇ) । ಮ.ಭಾ.ಮು. ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣೋದೇವತಾ (ಹೃದಯೇ)। ಯಥಾಶಕ್ತಿ ಜಪೇ (ಜಪೋಪಸಂಹಾರೇ) ವಿನಿಯೋಗಃ॥**

**109.** ಗಾಯತ್ರೀಗೆ ಧ್ಯಾನಶ್ಲೋಕಗಳು: — ವಿಶ್ವಾಮಿತ್ರ ಗಾಯತ್ರೀಗೆ ಐತರೇಯ ಭಾಷ್ಯದಲ್ಲೂ ಸದಾಚಾರಸ್ಮೃತಿಯಲ್ಲೂ ತೋರಿಸಿದಂತೆ 'ಧ್ಯೇಯಃ ಸದಾ ಸವಿತೃಮಂಡಲ ಮಧ್ಯವರ್ತೀ' ಎಂಬ ನರಸಿಂಹ ಪುರಾಣೋಕ್ತ ಶ್ಲೋಕವೇ ಧ್ಯಾನ ಶ್ಲೋಕ. ಸಂಧ್ಯಾಗಾಯತ್ರೀಗೆ ಎರಡೇ ಕೈಗಳಿರುವ ನಾರಾಯಣನನ್ನೇ ಧ್ಯಾನ ಮಾಡಬೇಕು. ಅಲ್ಲದೆ ತಂತ್ರಸಾರದಲ್ಲೂ ಸಂಧ್ಯಾಭಾಷ್ಯದಲ್ಲೂ ತೋರಿಸಿರುವಂತೆ ಆ ಎರಡು ಕೈಗಳನ್ನು ಆ ಸ್ವಾಮಿ ತನ್ನ ತೊಡೆಗಳ ಮೇಲೆ ಇಟ್ಟುಕೊಂಡಿದ್ದಾನೆಂದೂ (ಅಂಕಸ್ಥ ದೋರ್ದ್ವಯಃ) ಮತ್ತು 'ಧೃತಶಂಖಚಕ್ರಃ' ಎಂದು ಹೇಳುವುದರಿಂದ ಬಲಗೈಯಲ್ಲಿ ಶಂಖವನ್ನು ಎಡಗೈಯಲ್ಲಿ ಚಕ್ರವನ್ನೂ ಧರಿಸಿದ್ದಾನೆಂದೂ ಧ್ಯಾನಮಾಡಬೇಕು — ಇದೆಲ್ಲಾ ಸಂಧ್ಯಾಗಾಯತ್ರಿಯ ಧ್ಯಾನದ ವಿಚಾರವಾಯಿತು.

ಇನ್ನು ಬ್ರಹ್ಮಗಾಯತ್ರೀ ಮಹಾಮಂತ್ರಕ್ಕೆ ತಂತ್ರಸಾರದಲ್ಲಿ (೧ ಅ. ೪೨ ಶ್ಲೋ) ಹೇಳಿರುವ ಈ ಶ್ಲೋಕವನ್ನೇ ಹೇಳಿಕೊಳ್ಳಬೇಕು, 'ಧ್ಯೇಯಸ್ಸದಾ'ಎಂಬ ಧ್ಯಾನಶ್ಲೋಕವನ್ನಲ್ಲ –

**ಪ್ರೋದ್ಯದಾದಿತ್ಯ ವರ್ಣಶ್ಚ ಸೂರ್ಯಮಂಡಲಮಧ್ಯಗಃ I**
**ಚಕ್ರಶಂಖಧರೋಂಕಸ್ಥ – ದೋರ್ದ್ವಯೋ ಧ್ಯೇಯ ಏವ ಚII**

(ಶಬ್ದಾರ್ಥ) ಪ್ರೋದ್ಯತ್–ಆಗತಾನೇ ಉದಯಿಸುತ್ತಿರುವ. ಅಂಕಸ್ಥ– ತೊಡೆಗಳ ಮೇಲೆ ಇಟ್ಟುಕೊಂಡಿರುವ ದೋಃ–ದ್ವಯಃ–ಎರಡು ಕೈ (ತೋಳು) ಗಳುಳ್ಳವನು.

(ಅರ್ಥ)ಪ್ರೋದ್ಯತ್–ಆದಿತ್ಯವರ್ಣಶ್ಚ – ಆಗತಾನೇ ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪು ಬಣ್ಣವುಳ್ಳವನೆಂದೂ, ಸೂರ್ಯಮಂಡಲ ಮಧ್ಯಗಃ – ಸೂರ್ಯಮಂಡಲದ ಮಧ್ಯದಲ್ಲಿ ಕುಳಿತಿರುವವನೆಂದೂ, ಚಕ್ರ –ಶಂಖ–ಧರಃ – ಮೇಲಿನ ಎರಡು ಕೈಗಳಲ್ಲಿ ಬಲಗಡೆ ಚಕ್ರವನ್ನೂ ಎಡಗಡೆ ಶಂಖವನ್ನೂ ಧರಿಸಿದ್ದಾನೆಂದೂ, ಅಂಕಸ್ಥ–ದೋರ್–ದ್ವಯಃ – ಕೆಳಗಿನ ಎರಡು ಕೈಗಳನ್ನು ಮೇಲ್ಮುಖವಾಗಿ (ಉತ್ತಾನ) ಒಂದರ ಮೇಲೆ ಒಂದಿಟ್ಟುಕೊಂಡು ತೊಡೆಯ ಮೇಲೆ ಇಟ್ಟುಕೊಂಡಿದ್ದಾನೆಂದೂ (ಹೀಗೆ ನಾಲ್ಕು ಕೈಗಳುಳ್ಳವನೆಂದೂ) ಧ್ಯೇಯಃ ಏವ ಚ–ಧ್ಯಾನ ಮಾಡಬೇಕು. (ಅಂಕಸ್ಥ ದೋರ್ದ್ವಯಃ ಎಂಬುದಕ್ಕೆ ಫಲಾರಿಯವರು 'ಅಂಕಸ್ಥಿತ– ಉತ್ತಾನಪಾಣಿದ್ವಯಃ' ಎಂದರೆ ತೊಡೆಯ ಮೇಲಿಟ್ಟುಕೊಂಡಿರುವ ಮೇಲ್ಮುಖವಾಗಿರುವ ಎರಡು ಕೈಗಳುಳ್ಳವನು ಎಂದು ಅರ್ಥ ಬರೆದಿದ್ದಾರೆ. ಅಭಿಪ್ರಾಯವೇನೆಂದರೆ ಎಡಗೈಯನ್ನು ಅಗಲಿಸಿ ಅಂದರೆ ಮೇಲ್ಮುಖವಾಗಿರುವಂತೆ ಹಿಡಿದುಕೊಂಡು ಅದರ ಮೇಲೆ ಬಲ ಅಂಗೈಯನ್ನೂ ಮೇಲ್ಮುಖವಾಗಿರುವಂತೆ ಇಟ್ಟುಕೊಂಡು ಎರಡೂ ಕೈಗಳನ್ನು ಅಂಕದ ಮೇಲಿಟ್ಟುಕೊಂಡಿದ್ದಾನೆ ಎಂದರ್ಥ. ಮೇಲಿನ ಎರಡು ಕೈಗಳಲ್ಲಿ ಬಲಗಡೆ ಚಕ್ರವನ್ನೂ ಎಡಗಡೆ ಶಂಖವನ್ನೂ ಧರಿಸಿದ್ದಾನೆ ಎಂದು ನಾಲ್ಕು ಹಸ್ತಗಳ ರೂಪವನ್ನು ಬ್ರಹ್ಮಗಾಯತ್ರೀಗೆ ಜಪದಲ್ಲಿ ಧ್ಯಾನ ಮಾಡಬೇಕು. ಶ್ರೀ ಬನ್ನಂಜೆ ಗೋವಿಂದಾಚಾರ್ಯರೂ ಸಹ 'ಸೂರ್ಯ ಮಂಡಲದ ನಡುವೆ ಕುಳಿತಿರುವ, ಎರಡು ಕೈಗಳಿಂದ ಚಕ್ರ–ಶಂಖಗಳನ್ನು ಧರಿಸಿ ಉಳಿದೆರಡು ಕೈಗಳನ್ನು ತೊಡೆಯ ಮೇಲಿರಿಸಿಕೊಂಡಿರುವ' ಎಂದು ಅರ್ಥ ಬರೆದಿದ್ದಾರೆ.)

(ತಾತ್ಪರ್ಯ) – ಸವಿತೃನಾಮಕ ಶ್ರೀಮನ್ನಾರಾಯಣನು ಉದಯಿಸುತ್ತಿರುವ ಸೂರ್ಯನಂತೆ ಹೊಂಗೆಂಪು ವರ್ಣವುಳ್ಳವನು. ಅವನು ಸೂರ್ಯಮಂಡಲದ ಮಧ್ಯದಲ್ಲಿ ಕುಳಿತಿದ್ದಾನೆ. ಅವನಿಗೆ ನಾಲ್ಕು ಕೈಗಳಿವೆ. ಮೇಲಿನ ಎರಡು ಕೈಗಳಲ್ಲಿ ಚಕ್ರ–ಶಂಖಗಳನ್ನು ಧರಿಸಿದ್ದಾನೆ. ಕೆಳಗಿನ ಎರಡು ಕೈಗಳನ್ನು ಅಂಗತ

(ಮೇಲ್ಮುಖವಾಗಿ) ಒಂದರ ಮೇಲೊಂದು (ಕೆಳಗೆ ಎಡಗೈ ಮೇಲೆ ಬಲಗೈ) ಇಟ್ಟುಕೊಂಡು ಎರಡನ್ನೂ ತೊಡೆಯಮೇಲಿಟ್ಟು ಕೊಂಡಿದ್ದಾನೆ ಎಂದು ಧ್ಯಾನ ಮಾಡಬೇಕು. ಇದೇ ಬ್ರಹ್ಮಗಾಯತ್ರೀ ಮಂತ್ರದ ಧ್ಯಾನ ಶ್ಲೋಕದ ಭಾವಾರ್ಥ.

**110. ಗಾಯತ್ರೀ ಮಂತ್ರಾರ್ಥ** — ಗಾಯತ್ರಿಯ ಎರಡನೇ ಪಾದದಲ್ಲಿರುವ 'ಧೀಮಹಿ' = ನಾವು ಧ್ಯಾನ ಮಾಡೋಣ, ಧ್ಯಾನ ಮಾಡಬೇಕು ಎಂಬುದೇ ಪ್ರಧಾನಕ್ರಿಯೆ. ಇದಕ್ಕೆ 'ಭರ್ಗಃ' ಎಂಬುದೇ ಕರ್ಮ, ಇದು ಸಕಾರಾಂತ ನಪುಂಸಕಲಿಂಗ ಶಬ್ದ (ಮನಃ ಶಿರಃ ಎಂಬಂತೆ) — ಎಂಬುದು ಒಂದು ಪಕ್ಷ; ರಾಮ ಶಬ್ದದಂತೆ ಅಕಾರಾಂತ ಪುಲ್ಲಿಂಗಶಬ್ದ ಎಂಬುದು ಇನ್ನೊಂದು ಪಕ್ಷ. ಋಗ್ಭಾಷ್ಯದಲ್ಲಿ ಸಕಾರಾಂತ ಶಬ್ದದ ಅರ್ಥ ಹೇಳಿದ್ದಾರೆ — ಭಾ-ರತಿ-ಜ್ಞಾನರೂಪತ್ವಾತ್ ಭರ್ಗಃ' (ವಿವರಣೆ) ಭರ್ಗಃ ಎಂಬಲ್ಲಿ ಭ.ರ.ಗ್. ಅಸ್ ಎಂದು ನಾಲ್ಕು ಅವಯವಗಳಿವೆ. ಭಕಾರವು 'ಭಾ' ಪ್ರಕಾಶಿಸು ಎಂಬ ಧಾತುವಿನ ರೂಪವಾದ್ದರಿಂದ ಅದಕ್ಕೆ 'ಪ್ರಕಾಶ' ಎಂದು ಅರ್ಥವಾಗುತ್ತದೆ. ರಮ್ = ಸಂತೋಷಪಡು, ಗಮ್ = ಹೋಗು ಮತ್ತು ತಿಳಿ ಎಂಬ ಧಾತುಗಳ ರೂಪವೇ ರಕಾರ ಗಕಾರಗಳು. (ಧಾತುಗಳ ಕಡೆಯ ಅಮ್ ಎಂಬುದಕ್ಕೆ ಸಂಸ್ಕೃತ ವ್ಯಾಕರಣದ ಪ್ರಕಾರ ಟಿ ಎಂದು ಹೆಸರು; ಅದು ಲೋಪವಾದ್ದರಿಂದ ಕೇವಲ ರ್-ಗ್ ಎಂದು ಉಳಿದುಕೊಂಡುವು); ಆದ್ದರಿಂದ ಇವಕ್ಕೆ ಕ್ರಮವಾಗಿ ರತಿ ಅಥವಾ ಸುಖ ಮತ್ತು ಜ್ಞಾನ ಎಂದು ಅರ್ಥವಾಗುತ್ತದೆ. ಅಸ್ ಎಂಬುದು 'ಉಳ್ಳವನು' ಎಂಬ ಅರ್ಥದಲ್ಲಿ ಬಂದಿರುವ ಪ್ರತ್ಯಯ; ಅದನ್ನು ವ್ಯಾಕರಣದಲ್ಲಿ 'ಅಸುನ್' ಪ್ರತ್ಯಯ ಎನ್ನುತ್ತಾರೆ. ಹೀಗೆ ಭರ್ಗಃ ಎಂದರೆ ಪ್ರಕಾಶ-ಸುಖ ಮತ್ತು ಜ್ಞಾನ ಸ್ವರೂಪವನ್ನು ಎಂದು ಅರ್ಥವಾಯಿತು.

ಅಕಾರಾಂತ ಪುಲ್ಲಿಂಗ ಎಂದಿಟ್ಟುಕೊಂಡರೆ ಭರ + ಗ ಎಂದು ಎರಡೇ ಭಾಗ ಆಗುತ್ತದೆ. ಭರ ಎಂದರೆ ಧರಿಸು, ಭರಿಸು ಹೊತ್ತುಕೋ ಎಂದರ್ಥ. ಆ ಭಗವಂತ ಸಕಲ ಜಗತ್ತನ್ನೂ ತನ್ನ ಹೊಟ್ಟೆಯಲ್ಲಿ ಧರಿಸಿದ್ದಾನೆ. ಗ ಎಂಬುದು ಗಮ್ ಧಾತುವಿನ ರೂಪಾಂತರ, ಆದ್ದರಿಂದ ಗ ಎಂದರೆ 'ಗಮನ ರೂಪತ್ವಾತ್' ಎಂದರ್ಥ. ಇದಕ್ಕೆ ಎರಡು ಪ್ರಕಾರ ಅರ್ಥವಾಗುತ್ತದೆ— ನಮ್ಮನ್ನು ಧರಿಸುವುದಕ್ಕಾಗಿ ನಮ್ಮ ಹೃದಯದಲ್ಲೇ ಇರುವ ಎಂಬುದು ಒಂದು ಅರ್ಥ. ಮುಕ್ತಿಯಲ್ಲಿ ಸೇರಬೇಕಾದವನು — ಹೊಂದಬೇಕಾದವನು (ಗಮ್ಯಂ) ಎಂದೂ ಅರ್ಥವಾಗುತ್ತದೆ. ಆದ್ದರಿಂದ ಭರ್ಗಃ-ಭರಣ-ಗಮನರೂಪತ್ವಾತ್ ಭರ್ಗಃ ಎಂಬ ವ್ಯುತ್ಪತ್ತಿಯಿಂದ-ಸಕಲ ಜಗತ್ತನ್ನು ಧರಿಸಿರುವುದಲ್ಲದೆ ಸಕಲ ಪ್ರಾಣಿಗಳ ಹೃದಯದಲ್ಲಿರುವ ಮತ್ತು ಸಕಲ ಪ್ರಾಣಿಗಳೂ ಕಡೆಯಲ್ಲಿ ಮುಕ್ತಿಯಲ್ಲೋ ಅಥವಾ ನಿತ್ಯನರಕದಲ್ಲೋ ಸೇರಬೇಕಾದ ಸ್ವಾಮಿ ಎಂದರ್ಥ —ಇಂಥ ಸ್ವಾಮಿಯ ಸ್ವರೂಪವನ್ನು — ಧೀಮಹಿ-ನಾವೆಲ್ಲ ಧ್ಯಾನ ಮಾಡೋಣ ಎಂಬುದೇ ಗಾಯತ್ರಿಯ ಪ್ರಧಾನಾರ್ಥ.

'ಭರ್ಗಃ' ಶಬ್ದಕ್ಕೆ ತತ್, ವರೇಣ್ಯಂ ಎಂದು ಎರಡು ವಿಶೇಷಣಗಳು. ತತ್ ಎಂಬುದು ಅದು. ಆ ಎಂಬ ಅರ್ಥವುಳ್ಳ (ನಪುಂಸಕ ಲಿಂಗ) ಸರ್ವನಾಮ. ದೂರದಲ್ಲಿರುವ ಪದಾರ್ಥಗಳನ್ನು ಅಥವಾ ಕಣ್ಣಿಗೆ ಕಾಣಿಸುವ ಪದಾರ್ಥಗಳನ್ನು 'ತತ್' — ಎಂದು ಹೇಳುತ್ತೇವೆ. ಆದರಂತೆ ಈ ಭಗವಂತ ಅಗೋಚರನಾದ್ದರಿಂದ ಅವನನ್ನು ಈ ಮಂತ್ರ ತತ್— ಅಗೋಚರ ಎಂದು ಹೇಳುತ್ತದೆ. (ಗೀತೆಯಲ್ಲಿ 'ಓಂತತ್‌ಸದಿತಿ ಪ್ರೋಕ್ತಃ' ಎಂಬುದಕ್ಕೆ ಹೇಳಿದ ಅರ್ಥ ಇದು). (ಋಗ್ಭಾಷ್ಯದಲ್ಲಿ ಇದಕ್ಕೆ 'ಗುಣೈಸ್ತತಃ' ಎಂದು ಯೋಗಾರ್ಥ ಹೇಳಿದ್ದಾರೆ. 'ತನು ವಿಸ್ತಾರೇ' ಎಂದು ಧಾತುಪಾಠವಿರುವುದರಿಂದ ತನ್ ಎಂದರೆ ವಿಸ್ತರಿಸು, ವ್ಯಾಪಿಸು ಎಂದರ್ಥ ಆದರಿಂದ ತತ (ಭೂತಕೃದಂತರೂಪ) —ವ್ಯಾಪ್ತನಾದವನು ಎಂಬ ಅರ್ಥದಲ್ಲಿ ಡತ್ ಎಂಬ ಉಣಾದಿ ಪ್ರತ್ಯಯ ಬಂದು ತತ್ ಎಂದಾಗಿದೆ; ಯಾವುದರಿಂದ ವ್ಯಾಪ್ತ ಎಂದರೆ ಯೋಗ್ಯತಯಾ 'ಗುಣಗಳಿಂದ ವ್ಯಾಪ್ತನಾದಂಥ' ಎಂದು ಅರ್ಥವಾಗುತ್ತದೆ; ಆದ್ದರಿಂದ ತತ್ ಎಂದರೆ ಗುಣಗಳಿಂದ ವ್ಯಾಪ್ತನಾದ ಅಥವಾ ಪರಿಪೂರ್ಣನಾದ ಎಂದರ್ಥ.

'ವರೇಣ್ಯಂ' ಎಂಬ ಶಬ್ದವು ವೃ—ವರಿಸು, ಆಶ್ರಯಿಸು ಎಂಬ ಧಾತುವಿನ ರೂಪ; ವೃ—ವರ್ ಎಂಬ ಧಾತುವಿನ ಮೇಲೆ ಏಣ್ಯ ಎಂಬ ಪ್ರತ್ಯಯ ಬಂದು ವರೇಣ್ಯಂ ಎಂದಾಗಿದೆ; ಇದಕ್ಕೆ 'ವರಣೀಯ' ಆಶ್ರಯಿಸಲು ಯೋಗ್ಯನಾದವನು —ಧ್ಯಾನ ಮಾಡಲು ಯೋಗ್ಯನಾದವನು ಎಂದರ್ಥ; ಹೇಗೆ ವರೇಣ್ಯ ಎಂದರೆ ಹಿಂದಿನ ತತ್—ಗುಣಗಳಿಂದ ವ್ಯಾಪ್ತವಾದ್ದರಿಂದ ಎಂದು ಸಮಾಧಾನ—ಹೀಗೆ ವಿಶೇಷಣವೇ ಕಾರಣವೂ ಆಗಿದ್ದರೆ ಅದನ್ನು ಹೇತುಗರ್ಭ ವಿಶೇಷಣ ಎಂದು ಸಂಸ್ಕೃತದಲ್ಲಿ ಹೇಳುತ್ತಾರೆ— ಹೀಗೆ ತತ್—ವರೇಣ್ಯಂ ಎಂಬುದು ಜೋಡಿ ಪದಗಳು —ಗುಣಗಳಿಂದ ವ್ಯಾಪ್ತನಾದ್ದರಿಂದಲೇ ಎಲ್ಲರಿಂದಲೂ ವರಿಸಲು ಯೋಗ್ಯನಾಗಿದ್ದಾನೆ ಎಂದು ಅರ್ಥ; ಋಗ್ಭಾಷ್ಯದಲ್ಲಿ ಇದನ್ನೇ 'ವರಣೀಯೋ ಗುಣೋನ್ನತೇಃ' ಎಂದು ಹೇಳಿದ್ದಾರೆ (ಉನ್ನತೇಃ ಬಹಳ ಎತ್ತರದಲ್ಲಿರುವುದ ರಿಂದ— ಸರ್ವೋತ್ತಮನಾದ್ದರಿಂದ ಎಂದರ್ಥ).

ಮುಂದೆ ಈ ಸ್ವರೂಪವು ಯಾರದ್ದು? ಎಂದರೆ ಅಲ್ಲೇ ಇರುವ 'ಸವಿತುಃ ದೇವಸ್ಯ' ಎಂಬ ಪದಗಳು ಹೇಳುತ್ತವೆ. 'ಸವಿತುಃ' ಎಂಬುದು ಸವಿತೃ—ಸೂರ್ಯ ಎಂಬ ಶಬ್ದದ ಷಷ್ಠೀ ಏಕವಚನ ರೂಪ. ಆದ್ದರಿಂದ 'ಸವಿತುಃ ದೇವಸ್ಯ' ಎಂದರ ಸೂರ್ಯದೇವನ ಎಂದು ಸಾಮಾನ್ಯಾರ್ಥವಾಗುತ್ತದೆ. ಆದರೆ ಇಲ್ಲಿ ಸವಿತುಃ ಎಂದರೆ ಪ್ರಸವಿತುಃ 'ಸೃಷ್ಟ್ಯುತ್ಪತ್ತೋ ಹರಿ' ಎಂದರೆ ಜಗತ್ ಸೃಷ್ಟಿಕರ್ತನಾದ್ದರಿಂದ ಸವಿತೃ ನಾಮಕನಾದ ಎಂದು ಅರ್ಥ ಮಾಡಿ (ಯೋಜನೆಯಿಂದ) ನಾರಾಯಣ ದೇವನ ಎಂದು ಅರ್ಥ ಹೇಳಬೇಕು. ಸಂಸ್ಕೃತದಲ್ಲಿ 'ಸೂ' ಧಾತುವಿಗೆ ಪ್ರಸವಿಸು—ಹಡಿಯುವುದು—ಸೃಷ್ಟಿ ಮಾಡುವುದು ಎಂದು ಅರ್ಥ. ಅದರ ಮೇಲೆ ತೃಚ್ ಎಂಬ ಪ್ರತ್ಯಯ ಬಂದು ಸವಿತೃ—ಸವಿತಾ—ಸವಿತುಃ ಎಂಬ ರೂಪಗಳಾಗಿವೆ. 'ಸವಿತುಃ ದೇವಸ್ಯ' = ಜಗತ್ ಸೃಷ್ಟ್ಯಾದಿ ಕರ್ತನಾದ್ದರಿಂದ ಸವಿತೃನಾಮಕನಾದ

ನಾರಾಯಣ ದೇವರ—ತತ್ ವರೇಣ್ಯಂ ಭರ್ಗಃ—ಗುಣಗಳಿಂದ ವ್ಯಾಪ್ತವಾದ ಆದರೂ ಅಗೋಚರವಾದ ಆದ್ದರಿಂದಲೇ (ಗುಣೋನ್ನತೇಃ) ಎಲ್ಲರಿಂದಲೂ ಆಶ್ರಯಿಸಲ್ಪಡಬೇಕಾದ (ಸರ್ವೋತ್ತಮವಾದ) ಭರಣ–ಗಮನರೂಪವಾದ ಮತ್ತು ಪ್ರಕಾಶ (ಭ) ಸುಖ (ರ) ಜ್ಞಾನ (ಗ) ಸ್ವರೂಪವನ್ನು, ಧೀಮಹಿ–ನಾವೆಲ್ಲರೂ ಧ್ಯಾನಮಾಡಬೇಕು (ಇಲ್ಲಿ ಧೀಮಹಿ ಎಂಬ ಬಹುವಚನವು 'ಅಖಿಲೈಃ ಜನೈಃ ಧ್ಯೇಯಃ' ಎಂಬ ವಿಶಾಲವಾದ ಅರ್ಥವನ್ನು ತೋರಿಸುತ್ತಾ ರಮಾಬ್ರಹ್ಮಾದಿ ಸಕಲರಿಂದಲೂ ಧ್ಯೇಯನಾಗಿದ್ದಾನೆ ಎಂದರ್ಥ.)

ತೃತೀಯ ಚರಣವು 'ಸವಿತುಃ ದೇವಸ್ಯ' ಎಂಬುದಕ್ಕೆ ವಿಶೇಷಣ ರೂಪವಾದ ವಾಕ್ಯ. ಇದರಲ್ಲಿ (ಹಿಂದೆ ಖಂಡ 104ರಲ್ಲಿ ತೋರಿಸಿದಂತೆ) ಧಿಯಃ, ಯಃ, ನಃ, ಪ್ರಚೋದಯಾತ್ ಎಂದು ನಾಲ್ಕು ಪದಗಳಿವೆ. ಧಿಯಃ ಎಂಬುದು 'ಧೀ' = ಬುದ್ಧಿ ಶಬ್ದದ ದ್ವಿತೀಯಾ ಬಹುವಚನ ರೂಪ, ''ಬುದ್ಧಿಗಳನ್ನು'' ಎಂಬ ಬಹುವಚನವು ಬುದ್ಧಿಯ ಬೇರೆ–ಬೇರೆ ಮಟ್ಟಗಳನ್ನು ತೋರಿಸುತ್ತದೆ. ಯಃ ಎಂಬುದು ಸಂಬಂಧ ಸೂಚಕ ಸರ್ವನಾಮ–ಯಾವನು, ಯಾರು, ನಃ ಎಂಬುದು ಅಸ್ಮದ್ (ನಾನು) ಶಬ್ದದ ಷಷ್ಠೀ ಬಹುವಚನರೂಪ, ಆದಕ್ಕೆ 'ನಮ್ಮೆಲ್ಲರ' ಎಂದರ್ಥ; ಇದು 'ಧಿಯಃ' ಎಂಬುದುರ ಜೊತೆ ಸೇರುತ್ತದೆ. —ನಃ ಧಿಯಃ–ನಮ್ಮೆಲ್ಲರ ಬುದ್ಧಿಗಳನ್ನೂ—ಎಂದು ಅನ್ವಯ. ಪ್ರಚೋದಯಾತ್ ಎಂಬುದು ವೈದಿಕರೂಪ —ಇದನ್ನು ವ್ಯಾಕರಣದಲ್ಲಿ 'ಲೇಟ್' ರೂಪ ಎನ್ನುತ್ತಾರೆ, 'ಚುದ ಪ್ರೇರಣೇ' ಎಂದು ಧಾತುಪಾಠವಿರುವುದರಿಂದ ಚುದ ಎಂದರೆ ಪ್ರೇರಿಸು ಎಂದರ್ಥ; ಪ್ರ ಉಪಸರ್ಗ. ಆದ್ದರಿಂದ ಪ್ರಚೋದಯಾತ್–ಎಂದರೆ ಪ್ರೇರಿಸುತ್ತಾನೋ ಎಂದರ್ಥ. ಹೀಗೆ ಒಟ್ಟಿನಲ್ಲಿ ಯಃ ನಃ ಧಿಯಃ ಪ್ರಚೋದಯಾತ್–ಎಂದರೆ ಯಾರು ನಮ್ಮೆಲ್ಲರ (ಬೇರೆ ಬೇರೆ ಮಟ್ಟದ) ಬುದ್ಧಿಗಳನ್ನೂ ಪ್ರೇರಿಸುತ್ತಾನೋ ಎಂಬುದು ಮೂರನೇ ಪಾದದ ಅರ್ಥ — ಅಂಥಾ ನಾರಾಯಣನನ್ನು ನಾವು ಧ್ಯಾನಿಸಬೇಕು ಎಂಬುದೇ ಗಾಯತ್ರಿಯ ಅರ್ಥ.

ಈಶಾವಾಸ್ಯೋಪನಿಷದ್ಭಾಷ್ಯದ ಮಂಗಳ ಶ್ಲೋಕದಲ್ಲಿ ಈ (ಗಾಯತ್ರಿಯ) ತೃತೀಯ ಚರಣದ ಅರ್ಥವನ್ನೇ ವಿಸ್ತರಿಸಿ—

**ಯಸ್ಮಾದ್ ಬ್ರಹ್ಮರುದ್ರೇಂದ್ರಾದಿ–ದೇವತಾನಾಂ ಶ್ರಿಯೋಽಪಿ ಚ।**
**ಜ್ಞಾನಸ್ಫೂರ್ತಿಃ ಸದಾ ತಸ್ಮೈ ಹರಯೇ ಗುರವೇ ನಮಃ॥**

ಎಂದು ಹೇಳಿದ್ದಾರೆ. ಇಲ್ಲಿ ಬ್ರಹ್ಮ–ರುದ್ರ–ಇಂದ್ರ ಎಂದು ಹೇಳಿದ್ದರಿಂದ ಬುದ್ಧಿಯ ಬೇರೆ–ಬೇರೆ ಮಟ್ಟಗಳನ್ನು ಹೇಳಿದಂತಾಯಿತು. ಇವರ ಬುದ್ಧಿಯೆಲ್ಲಾ 'ಅನಿತ್ಯ'ವಾದುದು. ಆದರೆ ಲಕ್ಷ್ಮೀದೇವಿಯು ಅನಾದಿ–ನಿತ್ಯಳು. ಆದ್ದರಿಂದಲೇ ಅವಳನ್ನೇ ಬೇರೆ ಮಾಡಿ 'ಸದಾ ಜ್ಞಾನ ಸ್ಫೂರ್ತಿಃ' ಎಂದು ಹೇಳಿದರು. ಹೀಗೆ ಎಲ್ಲರಿಗೂ ಜ್ಞಾನಸ್ಫೂರ್ತಿಯನ್ನು ಕೊಡುವವನು ಅವನೇ–ಆ ಶ್ರೀಹರಿಯೇ ಎಂದು ಹೇಳಿದರು.

ಒಟ್ಟಿನಲ್ಲಿ ಗಾಯತ್ರಿಯ ಅರ್ಥ ಏನಾಯಿತೆಂದರೆ—ಯಃ ನಃ ಧಿಯಃ ಪ್ರಚೋದಯಾತ್—ಯಾವ ಭಗವಂತ ನಮ್ಮೆಲ್ಲರ ಬುದ್ಧಿಗಳನ್ನೂ ಪ್ರೇರಿಸುತ್ತಾನೋ (ಬುದ್ಧಿಸ್ಫೂರ್ತಿಯನ್ನು ಕೊಡುತ್ತಾನೋ), ಅಂಥಾ—ಸವಿತುಃ ದೇವಸ್ಯ—ಜಗತ್ ಸೃಷ್ಟ್ಯಾದಿಕರ್ತನಾದ್ದರಿಂದ ಸವಿತೃನಾಮಕನಾದ ಭಗವಂತ (ದೇವಸ್ಯ)—ನಾರಾಯಣನ, ತತ್ ವರೇಣ್ಯಂ ಭರ್ಗಃ ಧೀಮಹಿ— ಅಗೋಚರವಾದರೂ ಗುಣಪರಿಪೂರ್ಣವಾದ—ಆದ್ದರಿಂದಲೇ ಸರ್ವರಿಂದಲೂ ಆಶ್ರಯಿಸಲ್ಪಡುವ (ಸರ್ವೋತ್ತಮವಾದ) ಸಕಲ ಜಗತ್ತನ್ನೂ ಧರಿಸಿರುವುದರಿಂದಲೂ ಅದಕ್ಕಾಗಿ ಎಲ್ಲರ ಹೃದಯದಲ್ಲಿರುವ (ನೆಲೆಸಿರುವ) ಮತ್ತು ಕಡೆಯಲ್ಲಿ ಗಮ್ಯವಾದ (ಪ್ರಾಪ್ಯವಾದ) ಆ ಸ್ವಾಮಿಯ ಪ್ರಕಾಶ (ಭಾ) —ಸುಖ (ರ) —ಜ್ಞಾನ ಸ್ವರೂಪವನ್ನು ನಾವೆಲ್ಲರೂ ಧ್ಯಾನಿಸಬೇಕು—ಎಂಬುದೇ ಗಾಯತ್ರಿಯ ಅರ್ಥ. ಈ ಅರ್ಥವನ್ನೇ ಋಗ್ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ —

**ಗುಣೈಸ್ತತಃ ಪ್ರಸವಿತಾ ವರಣೀಯೋ ಗುಣೋನ್ನತೇಃ।**
**ಭಾ—ರತಿ—ಜ್ಞಾನರೂಪತ್ವಾದ್ ಭರ್ಗೋ, ಧ್ಯೇಯೋಽಖಿಲೈರ್ಜನೈಃ।**
**ಪ್ರೇರಕೋಽಶೇಷ ಬುದ್ಧೀನಾಂ ಸ ಸಗಾಯತ್ರ್ಯರ್ಥ ಈರಿತಃ॥**

**111. ಮಂತ್ರ ಜಪ—ಸಮಾಪ್ತಿ ಮತ್ತು ಅರ್ಘ್ಯಗಳ ವಿಚಾರ**—ಅಷ್ಟಮಹಾಮಂತ್ರಗಳನ್ನೂ ನಿತ್ಯ ಮಾಡಿಕೊಳ್ಳುವುದಿದ್ದರೆ ಹನ್ನೆರಡಕ್ಕಿಂತ ಹೆಚ್ಚು ಜಪಿಸಲು ಸಾಧ್ಯವಾಗಲಾರದು. ಸರದಿಯ ಮೇಲೆ ದಿನಕ್ಕೊಂದರಂತೆ ಮಾಡುವುದಾದರೆ ನೂರೆಂಟು ಜಪ ಮಾಡಬಹುದು, ಸಾವಿರಗಟ್ಟಲೆಯೂ ಜಪಿಸಬಹುದು. ಜಪ ಮುಗಿದ ಮೇಲೆ ಮೊದಲಿನಂತೆಯೇ ಪ್ರಾಣಾಯಾಮ, ಅಂಗನ್ಯಾಸ—ಕರನ್ಯಾಸ—ವರ್ಣನ್ಯಾಸ—ಅಂಗುಲಿನ್ಯಾಸ— ಋಷ್ಯಾದಿನ್ಯಾಸ ಎಲ್ಲವನ್ನೂ ಮಾಡಿಕೊಂಡು 'ಪ್ರೋದ್ಯದಾದಿತ್ಯವರ್ಣಾಭಃ' ಎಂಬ ಧ್ಯಾನ ಶ್ಲೋಕವನ್ನೂ ಪಠಿಸಿ, 'ಅನೇನ ಯಥಾಶಕ್ತಿ ಬ್ರಹ್ಮಗಾಯತ್ರೀ ಮಹಾಮಂತ್ರ ಜಪೇನ ಭಗವಾನ್ ಮ.ಭಾ.ಮು. ಶ್ರೀಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್। ಸುಪ್ರೀತೋ ವರದೋ ಭವತು। ಶ್ರೀ ಕೃಷ್ಣಾರ್ಪಣಮಸ್ತು। ಎಂದು ಹೇಳಿ ನೀರು ಬಿಡಬೇಕು. ಆಮೇಲೆ ನೀರನ್ನು ಗಾಯತ್ರೀಮಂತ್ರದಿಂದಲೇ ಮೂರಾವರ್ತಿ ಅಭಿಮಂತ್ರಿಸಿ ಪುನಃ ಬ್ರಹ್ಮಗಾಯತ್ರೀ ಮಂತ್ರವನ್ನು ಉಚ್ಚರಿಸಿ 'ಮ.ಭಾ.ಮು. ಸವಿತೃ ನಾಮಕ ಶ್ರೀಲಕ್ಷ್ಮೀನಾರಾಯಣಂ ತರ್ಪಯಾಮಿ' ಎಂದು ಹೇಳಿ ಅರ್ಘ್ಯ ಕೊಡಬೇಕು.

ಇಲ್ಲಿಗೆ ಬ್ರಹ್ಮಗಾಯತ್ರೀ ಮಹಾಮಂತ್ರದ ನಿರೂಪಣೆ ಮುಗಿಯಿತು.

—*—*—

# 6. ಮಾತೃಕಾಮಾಲಾ ಮಹಾಮಂತ್ರದ ಪೀಠಿಕೆ

**112. ಮಾಲಾಮಂತ್ರ ಎಂಬ ಹೆಸರು:**—ಮೊದಲು ಮಂತ್ರಗಳನ್ನು ಆರಂಭಿಸುವುದಕ್ಕೆ ಮೊದಲಲ್ಲೇ ತತ್ತ್ವನ್ಯಾಸವನ್ನೂ ಮಾತೃಕಾನ್ಯಾಸವನ್ನೂ ಮಾಡಿಕೊಂಡಿದ್ದೇವೆ. ಈಗ ಆ ಮಾತೃಕಾಮಂತ್ರಗಳನ್ನೇ ಮಾಲಾಕಾರವಾಗಿ ಜಪಿಸುತ್ತೇವೆ, ನ್ಯಾಸ ಮಾಡುವುದಿಲ್ಲ, ಎಂಬುದನ್ನು ತಿಳಿಸುವುದಕ್ಕಾಗಿ ಈ ಮಂತ್ರಕ್ಕೆ 'ಮಾತೃಕಾಮಾಲಾ ಮಹಾಮಂತ್ರ' ಎಂಬ ಹೆಸರು ಪ್ರಸಿದ್ಧವಾಗಿದೆ. ಕೆಲವರು 'ಮಾತೃಕಾ ಮಹಾಮಂತ್ರ' ಎಂದೂ ಹೇಳುವರು. ಮಾತೃಕಾ ಮಂತ್ರಗಳು ಅಕಾರಾದಿಯಾಗಿ ಳಕಾರದವರೆಗೆ ಐವತ್ತು ಇವೆಯೆಂದೂ ಇವುಗಳೆಲ್ಲವೂ ಪ್ರಣವದ ಎಂಟು ಅಕ್ಷರಗಳಿಂದಲೇ ಎಂಟು ಗುಂಪಾಗಿ ಒಡೆದು ಬಂದುವೆಂದೂ ಈ ಐವತ್ತು ವರ್ಣಗಳೂ ಅಜಾದಿ ಐವತ್ತು ಭಗವನ್ಮೂರ್ತಿಗಳಿಗೆ ವಾಚ್ಯಗಳಾಗಿವೆ ಎಂಬ ವಿಷಯವನ್ನೂ ಮಾತೃಕಾ ನ್ಯಾಸದ ನಿರೂಪಣೆಯಲ್ಲೇ ಹೇಳಿದ್ದೇವೆ, ಆದ್ದರಿಂದ ಇಲ್ಲಿ ಹೇಳುವುದು ಅನವಶ್ಯಕ.

ಅಕಾರಾದಿ ಐವತ್ತು ಅಕ್ಷರದ ಜೊತೆ ಕ್ಷ ಎಂಬ ಸಂಯುಕ್ತಾಕ್ಷರವನ್ನೂ ಸೇರಿಸಿಕೊಳ್ಳಬೇಕೆಂದೂ ಅದಕ್ಕೆ ಎರಡು ರೂಪಗಳುಳ್ಳ (ಮನುಷ್ಯ–ಮೃಗ) ನೃಸಿಂಹ ವಾಗ್ದೇವತೆಯೆಂದೂ ತಂತ್ರಸಾರದಲ್ಲಿ ಎರಡನೇ ಅಧ್ಯಾಯದಲ್ಲಿ (ಶ್ಲೋ ೩–೪) ಹೇಳಿದೆಯಲ್ಲದೆ 'ಜಪೇ ನ್ಯಾಸೇ ಚ ವಿಹಿತಃ ಕ್ಷೋಽಕ್ಷರಾಣಾಂ ಸದಾಽನ್ತತಃ' ಎಂದರೆ ಜಪದಲ್ಲೂ ನ್ಯಾಸದಲ್ಲೂ ಇದನ್ನು (ಕ್ಷಕಾರವನ್ನು) ಯಾವಾಗಲೂ ಕಡೆಯಲ್ಲಿ ಹೇಳಬೇಕೆಂದು ವಿಧಿಸಿದೆ. ಹೀಗೆ ಮಾತೃಕಾಮಂತ್ರಗಳು ಐವತ್ತೊಂದು; ಅವನ್ನು ಮಾಲಾಕಾರವಾಗಿ ಜಪಿಸುವುದೇ ಈ ಮಂತ್ರದ ಜಪವೆನಿಸುತ್ತದೆ. ಜಪವಾದ್ದರಿಂದ ಅದರ ಅಂಗವಾಗಿ ಪ್ರಾಣಾಯಾಮ, ಅಂಗನ್ಯಾಸ, ವರ್ಣನ್ಯಾಸ ಎಲ್ಲವನ್ನೂ ಕ್ರಮವಾಗಿ ಮಾಡಿಕೊಳ್ಳಬೇಕು.

**113. ಪ್ರಾಣಾಯಾಮಾದಿಗಳ ನಿರೂಪಣೆ:**—ಗುರುನಮಸ್ಕಾರದಲ್ಲಿ ಹನ್ನೊಂದನೇ ಸ್ಥಾನದಲ್ಲಿ 'ಮಂತ್ರ ದೇವತಾ ಮ.ಭಾ.ಮು. ಅಜಾದಿರೂಪಿ ಶ್ರೀಲಕ್ಷ್ಮೀನಾರಾಯಣಾಯ ನಮಃ' ಎಂದು ಹೇಳಿಕೊಳ್ಳಬೇಕು. ಮೂಲಮಂತ್ರದಿಂದ (ನಾರಾಯಣಾಷ್ಟಾಕ್ಷರ ಮಂತ್ರದಿಂದ)ಲೇ ಪ್ರಾಣಾಯಾಮ ಮಾಡಿಕೊಳ್ಳಬೇಕು. ಅಂಗನ್ಯಾಸಾದಿಗಳು ಹೇಗೆ ಎಂದರೆ ತಂತ್ರಸಾರದಲ್ಲಿ (೧ ಅ. ೪೪ ಶ್ಲೋ ) ಹೀಗೆ ಹೇಳಿದ್ದಾರೆ—

**.......ತಾರವನ್ನಿಖಿಲಂ ಸ್ಮೃತಮ್।**
**ಪಂಚಾಶದಕ್ಷರಾಣಾಂ ಚ ಪುಂಸೂಕ್ತಸ್ಯಾಪಿ ಸರ್ವಶಃ॥**

(ಅರ್ಥ) ಮಾತೃಕಾಮಾಲಾ ಮಹಾಮಂತ್ರಕ್ಕೂ ಪುರುಷಸೂಕ್ತ ಮಹಾಮಂತ್ರಕ್ಕೂ ಅಂಗನ್ಯಾಸ, ಋಷ್ಯಾದಿನ್ಯಾಸ, ಧ್ಯಾನಶ್ಲೋಕ ಎಲ್ಲವೂ ಪ್ರಣವಮಂತ್ರದಂತೆಯೇ ತಿಳಿಯಬೇಕು.

ಇದರಿಂದ 'ವಾಸುದೇವಾದಿಕಾಃ ಶುಕ್ಲ' ಎಂಬ ಧ್ಯಾನಶ್ಲೋಕ ಹೇಳಿಕೊಂಡು 'ಓಂ ಭೂಃ ಅಗ್ನ್ಯಾತ್ಮನೇ ಶ್ರೀಅನಿರುದ್ಧಾಯ' ಇತ್ಯಾದಿಗಳಿಂದ ಅಂಗನ್ಯಾಸ ಕರನ್ಯಾಸ ಮಾಡಿಕೊಳ್ಳಬೇಕು. ಆಮೇಲೆ ಮಾತೃಕಾನ್ಯಾಸದಲ್ಲಿ ಮಾಡಿಕೊಂಡಂತೆಯೇ ಐವತ್ತೊಂದು ವರ್ಣಗಳನ್ನು ನ್ಯಾಸ ಮಾಡಿಕೊಳ್ಳಬೇಕು — ಇದೇ ವರ್ಣನ್ಯಾಸ. (ಇದಕ್ಕೂ ಪುರುಷಸೂಕ್ತ ಮಂತ್ರಕ್ಕೂ ಅಂಗುಲಿನ್ಯಾಸ ಇಲ್ಲ) ಮಾತೃಕಾನ್ಯಾಸಕ್ಕೆ ಹೇಳಿಕೊಂಡಂತೆಯೇ ಇದಕ್ಕೂ ಋಷ್ಯಾದಿನ್ಯಾಸ, ಧ್ಯಾನಶ್ಲೋಕಗಳು. 'ಉದ್ಯದ್ಭಾಸ್ವತ್' ಎಂದು ಆರಂಭಿಸಿ 'ಸರ್ವಾಭರಣಾಭೂಷಿತಾಃ' ಎಂಬುದರವರೆಗೆ ಹೇಳಿಕೊಂಡು ಆಮೇಲೆ 'ತಾದೃಗ್‌ರೂಪಾಶ್ಚ' ಎಂಬ ಶ್ಲೋಕ, ಕಡೆಯಲ್ಲಿ 'ಧ್ಯಾಯೇನ್ನೃಸಿಂಹಂ' ಎಂಬ ನರಸಿಂಹ ಧ್ಯಾನದೊಡನೆ ಮುಗಿಸಬೇಕು. (ಜಪಾರಂಭಕ್ಕೆ ಸಂಕಲ್ಪ) — ಮ.ಭಾ.ಮು. ಶ್ರೀ ಅಜಾದಿರೂಪಿ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ ಮ.ಭಾ.ಮು. ಶ್ರೀಅಜಾದಿರೂಪಿ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಯಥಾಶಕ್ತಿ ಶ್ರೀಮಾತೃಕಾಮಾಲಾ ಮಹಾಮಂತ್ರ ಜಪಂ ಕರಿಷ್ಯೇ||

**114.** ಜಪವಿಧಾನ — ಓಂ ಅಂ ಅಜಾಯ ನಮಃ| ಓಂ ಆಂ ಆನಂದಾಯ ನಮಃ — ಎಂದು ಆರಂಭಿಸಿ, "ಓಂ ಕ್ಷಂ ಶ್ರೀಲಕ್ಷ್ಮೀನೃಸಿಂಹಾಯ ನಮಃ ಓಂ " ಎಂಬುದರವರೆಗೆ ಹೇಳುತ್ತಾ ಹೋಗಬೇಕು. ಆದರೆ ಈಗ ಬೇರೆ ಬೇರೆ ಅಂಗಗಳನ್ನು ಮುಟ್ಟದೆ ಕೈಮುಗಿಯಬೇಕು. ಹೀಗೆ ಕನಿಷ್ಠಪಕ್ಷ ಮೂರಾವರ್ತಿಯಾದರೂ ಹೇಳಬೇಕು. ಹೆಚ್ಚು ಅವಕಾಶವಿದ್ದರೆ ನಾಲ್ಕು ಅಥವಾ ಆರಾವರ್ತಿಯೂ ಹೇಳಬಹುದು.

**115.** ಜಪಸಮಾಪ್ತಿ — ಆಮೇಲೆ ಪುನಃ ಹಿಂದಿನಂತೆ ಪ್ರಾಣಾಯಾಮ, ಕರನ್ಯಾಸ, ಅಂಗನ್ಯಾಸಾದಿಗಳನ್ನು ಮಾಡಿ ಧ್ಯಾನ ಶ್ಲೋಕಗಳನ್ನು ಪಠಿಸಿ 'ಅನೇನ ಯಥಾಶಕ್ತಿ ಮಾತೃಕಾಮಾಲಾ ಮಹಾಮಂತ್ರ ಜಪೇನ ಭಗವಾನ್ ಮ.ಭಾ.ಮು. ಅಜಾದಿರೂಪಿ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್| ಸುಪ್ರೀತೋ ವರದೋ ಭವತು| ಶ್ರೀಕೃಷ್ಣಾರ್ಪಣಮಸ್ತು' ಎಂದು ನೀರು ಬಿಡಬೇಕು. ಅರ್ಘ್ಯ ಪ್ರದಾನಕ್ಕೆ ನೀರನ್ನು ನಾರಾಯಣಾಷ್ಟಾಕ್ಷರದಿಂದ ಅಭಿಮಂತ್ರಿಸಿ ಓಂ ಅಂ ಅಜಂ ತರ್ಪಯಾಮಿ| ಓಂ ಕ್ಷಂ ಶ್ರೀ ಲಕ್ಷ್ಮೀನರಸಿಂಹಂ ತರ್ಪಯಾಮಿ ಮ.ಭಾ.ಮು. ಶ್ರೀಅಜಾದಿರೂಪಿ ಲಕ್ಷ್ಮೀನಾರಾಯಣಂ ತರ್ಪಯಾಮಿ ಎಂದು ಮೂರು ಅರ್ಘ್ಯ ಕೊಟ್ಟರೆ ಸಾಕು

ಇಲ್ಲಿಗೆ ಮಾತೃಕಾಮಾಲಾ ಮಹಾಮಂತ್ರ
ನಿರೂಪಣೆಯೂ ಮುಗಿಯಿತು

# 7. ಪುರುಷಸೂಕ್ತ

## ಮಹಾಮಂತ್ರದ ಪೀಠಿಕೆ

**116. ಮಂತ್ರೋದ್ಧಾರ:** — ಪುರುಷಸೂಕ್ತವೂ ಪರಂಪರಯಾ ಪ್ರಣವದಿಂದಲೇ ಅಭಿವ್ಯಕ್ತವಾಯಿತೆಂದು ಹೇಳಲು ತ್ರಿಪಾದಗಾಯತ್ರಿಯಿಂದ ಪುರುಷ ಸೂಕ್ತವು ಅಭಿವ್ಯಕ್ತವಾದ ವಿಚಾರವನ್ನು ತಂತ್ರಸಾರ (೧ ಅ. ೧೫ ಶ್ಲೋ) ತಿಳಿಸುತ್ತದೆ —

**ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ।**

(ಅರ್ಥ) ಪೌರುಷಂ ಸೂಕ್ತಂ — ಪುರುಷನಾಮಕ ವಿಷ್ಣುವನ್ನು ಪ್ರತಿಪಾದಿಸುವ ಪುರುಷಸೂಕ್ತವು, ತದ್ಭೇದಃ–ಆ ಗಾಯತ್ರೀಯಿಂದ ಅಭಿವ್ಯಕ್ತವಾಯಿತು. ಗಾಯತ್ರಿಯ ಮೂರು ಪಾದಗಳಿಂದ ತ್ರಿವರ್ಗಾತ್ಮಕವಾದ ಪುರುಷಸೂಕ್ತವು ಅಭಿವ್ಯಕ್ತವಾಗಿ ಗಾಯತ್ರಿಯ ಮೂರು ಪಾದಗಳಿಗೆ ವ್ಯಾಖ್ಯಾನರೂಪಗಳಾಗಿವೆ. ವೇದಾಃ ಪುರುಷ ಸೂಕ್ತಗಾಃ = ಪುರುಷಸೂಕ್ತದ ಮೂರು ವರ್ಗಗಳ ವಿವರಣೆಯೇ ಋಗಾದಿ ವೇದತ್ರಯಗಳು. ಹೀಗೆ ಪರಂಪರಯಾ ಸಕಲ ವೇದಗಳೂ ಓಂಕಾರಕ್ಕೆ ವ್ಯಾಖ್ಯಾನರೂಪವಾಗಿವೆ. 'ಓಂ' ಕಾರವು ವಿಷ್ಣುಪ್ರತಿಪಾದಕವಾದ್ದರಿಂದ ಸಕಲ ವೇದಗಳೂ ವಿಷ್ಣುಪ್ರತಿಪಾದಕವೆಂದು ಸಿದ್ಧವಾಗುತ್ತದೆ ಇನ್ನೊಂದು ರೀತಿಯಿಂದಲೂ ವಿಷ್ಣು ಸರ್ವಶಬ್ದವಾಚ್ಯ ಎಂಬುದನ್ನು ತೋರಿಸುತ್ತಾರೆ —

**ವೈದಿಕಾಃ ಸರ್ವಶಬ್ದಾಶ್ಚ ತಸ್ಮಾತ್ ಸರ್ವಾಭಿಧೋಽಸ್ಮ್ಯಹಮ್।**
**ಪಂಚಾಶದ್ವರ್ಣವಾಚ್ಯಾಶ್ಚ ಸರ್ವಶಬ್ದಾ ಅತೋಽಪಿ ಚ॥ (೧ ಅ. ೧೬ ಶ್ಲೋ)**

ಲೋಕದಲ್ಲಿ ಪ್ರಸಿದ್ಧವಾಗಿರುವ ಸಕಲ ಶಬ್ದಗಳು ವೈದಿಕ ಶಬ್ದಗಳಿಂದಲೇ ಅಭಿವ್ಯಕ್ತವಾದುವು. ಅಷ್ಟೇ ಅಲ್ಲದೆ ಸಕಲ ಪದಗಳು ಅಕಾರಾದಿ ಐವತ್ತು ಅಕ್ಷರಗಳ ಯೋಜನೆಯಿಂದಲೇ ಆಗುತ್ತವೆ. ಆ ಐವತ್ತು ವರ್ಣಗಳು ನನ್ನನ್ನೇ ಹೇಳುತ್ತವೆಯಾದ್ದರಿಂದಲೂ ಸಕಲ ಶಬ್ದಗಳೂ ಪರಂಪರಯಾ ನನ್ನನ್ನೇ ಹೇಳುತ್ತವೆ. ಹೀಗೆ ನಾನು ಸಮಸ್ತ ಶಬ್ದವಾಚ್ಯನಾಗಿದ್ದೇನೆ ಎಂದು ನಾರಾಯಣ ಬ್ರಹ್ಮದೇವರಿಗೆ ಹೇಳುತ್ತಾನೆ.

**117. ಪುರುಷಸೂಕ್ತ ಮಂತ್ರದ ನ್ಯಾಸಾದಿಗಳು:** — ಮಾತೃಕಾಮಾಲಾ ಮಹಾಮಂತ್ರದ ವಿವರಣೆಯಲ್ಲೇ ಆ ಮಂತ್ರಕ್ಕೂ ಪುರುಷಸೂಕ್ತಮಂತ್ರಕ್ಕೂ ನ್ಯಾಸಾದಿಗಳೆಲ್ಲವೂ ಪ್ರಣವ ಮಂತ್ರದಂತೆ ಎಂದು ಹೇಳಿರುವುದರಿಂದ ಪುರುಷಸೂಕ್ತ ಮಂತ್ರಕ್ಕೆ ನಾರಾಯಣಾಷ್ಟಾಕ್ಷರ ಮಂತ್ರದಿಂದ ಪ್ರಾಣಾಯಾಮ.

ಪ್ರಣವದಂತೆ ನಾಲ್ಕು ವ್ಯಾಹೃತಿಗಳಿಂದಲೂ ಸತ್ಯ ಶಬ್ದದಿಂದಲೂ ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ ನಮಃ ಇತ್ಯಾದಿ ಮಂತ್ರಗಳಿಂದ ನ್ಯಾಸ ಮಾಡಿಕೊಳ್ಳಬೇಕು. ಇದಕ್ಕೆ ವರ್ಣನ್ಯಾಸವಾಗಲಿ ಅಂಗುಲಿನ್ಯಾಸವಾಗಲಿ ಇಲ್ಲ. ಪ್ರಣವದಂತೆ ಅಂತರ್ಯಾಮಿಯೇ ಋಷಿ, ಮತ್ತು ಪುರುಷನಾಮಕ ಶ್ರೀಲಕ್ಷ್ಮೀನಾರಾಯಣನೇ ದೇವತೆ.

**118. ಛಂದೋ ವಿಚಾರ:** — ಪುರುಷಸೂಕ್ತಕ್ಕೆ ಋಗ್ವೇದ ಪಾಠದ ಕ್ರಮವೇ ಬೇರೆ, ಯಜುರ್ವೇದ ಪಾಠವೇ ಬೇರೆ. ಅಲ್ಲದೆ ಋಗ್ವೇದದಲ್ಲಿ ಹದಿನಾರೇ ಮಂತ್ರಗಳಿದ್ದರೆ ಕೃಷ್ಣಯಜುರ್ವೇದ ಪಾಠದಲ್ಲಿ ಹದಿನೆಂಟು ಮಂತ್ರಗಳಿವೆ. ಆಯಾ ಶಾಖೆಯವರು ಆಯಾ ಶಾಖೆಯ ಮಂತ್ರಪಾಠವನ್ನೇ ಪಠಿಸಬೇಕು ಎಂದು ಸೂಚಿಸುತ್ತಾ ಛಂದೋವಿಚಾರವನ್ನು ಹೀಗೆ ಹೇಳಿದ್ದಾರೆ (ತಂತ್ರಸಾರ ೧ ಅ. ೪೫ ಶ್ಲೋ) —

**ಅನುಷ್ಟುಭಶ್ಚ ತ್ರಿಷ್ಟುಪ್ ಚ ಛಂದೋऽಸ್ಯ ತ್ರಿಷ್ಟುಭೋऽಪಿ ವಾ।**

(ಅರ್ಥ) ಋಗ್ವೇದ ಪಾಠದಲ್ಲಿರುವ ಹದಿನಾರು ಮಂತ್ರಗಳಲ್ಲಿ ಮೊದಲ ಹದಿನೈದು ಮಂತ್ರಗಳು ಅನುಷ್ಟುಪ್ ಛಂದಸ್ಸು, ಕಡೆಯದು ತ್ರಿಷ್ಟುಪ್, ತೈತ್ತಿರೀಯ ಪಾಠದಲ್ಲಿ ಹದಿನೆಂಟು ಮಂತ್ರಗಳಿವೆ, ಮೊದಲ ಹದಿನೈದು ಅನುಷ್ಟುಪ್‌ಗಳು, ಕಡೆಯ ಮೂರೂ ತ್ರಿಷ್ಟುಪ್. ಆದ್ದರಿಂದ ಋಷ್ಯಾದಿನ್ಯಾಸವನ್ನು ಹೀಗೆ ಮಾಡಿಕೊಳ್ಳಬೇಕು — (ಇಬ್ಬರೂ) ಅಸ್ಯಶ್ರೀ ಪುರುಷಸೂಕ್ತ ಮಹಾಮಂತ್ರಸ್ಯ ಅಂತರ್ಯಾಮೀ ಋಷಿಃ (ಶಿರಸಿ) । (ಋಗ್ವೇದಿಗಳು) ಪಂಚದಶೋನುಷ್ಟುಭಃ। ಅಂತ್ಯಾ ತ್ರಿಷ್ಟುಪ್ (ಮುಖೇ) । (ಯಜುರ್ವೇದಿಗಳು) ಆದ್ಯಾಃ ಪಂಚದಶೋऽನುಷ್ಟುಭಃ ಅಂತ್ಯಾಸ್ತಿಸ್ರಸ್ತ್ರಿಷ್ಟುಭಃ (ಮುಖೇ) । (ಇಬ್ಬರೂ) ಪುರುಷರೂಪೀ ಮ.ಭಾ.ಮು. ಶ್ರೀಲಕ್ಷ್ಮೀನಾರಾಯಣೋ ದೇವತಾ (ಹೃದಯೇ) । ಯಥಾಶಕ್ತಿ ಜಪೇ (ಜಪೋಪಸಂಹಾರೇ) ವಿನಿಯೋಗಃ। ಉದ್ಯದ್ಭಾಸ್ವತ್.........ಶಕ್ತಿಮಾನ್ ಎಂಬುದೇ ಧ್ಯಾನಶ್ಲೋಕ. ಅದನ್ನು ಹೇಳಿ 'ಮ.ಭಾ.ಮು. ಶ್ರೀಪುರುಷರೂಪಿ ಲಕ್ಷ್ಮೀನಾರಾಯಣ ಪ್ರೇರಣಯಾ ಮ.ಭಾ.ಮು ಶ್ರೀಪುರುಷರೂಪಿ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಯಥಾಶಕ್ತಿ ಪುರುಷಸೂಕ್ತಮಂತ್ರ ಜಪಂ ಕರಿಷ್ಯೇ' ಎಂದು ಸಂಕಲ್ಪ ಮಾಡಬೇಕು.

**119. ಜಪ ವಿಧಾನ ಮತ್ತು ಸಮಾಪ್ತಿ–ಅರ್ಘ್ಯ ಪ್ರದಾನ:** — 'ಹರಿಃ ಓಂ, ಸಹಸ್ರಶೀರ್ಷಾಪುರುಷಃ' ಎಂದು ಆರಂಭಿಸಿ "ಸಾಧ್ಯಾಃ ಸಂತಿ ದೇವಾಃ" ಎಂಬುದರವರೆಗೆ ಋಗ್ವೇದಿಗಳು ಋಗ್ವೇದ ಪಾಠವನ್ನೂ ಯಜುರ್ವೇದಿಗಳು

ಯಜುರ್ವೇದ ಪಾಠವನ್ನೂ ಮೂರಾವರ್ತಿ ಕನಿಷ್ಠಪಕ್ಷ ಪಠಿಸಬೇಕು. ನಾಲ್ಕಾವರ್ತಿ ಅಥವಾ ಆರಾವರ್ತಿ ಬೇಕಾದರೂ ಸಾಧ್ಯವಿದ್ದರೆ ಪಠಿಸಬಹುದು. ಆಮೇಲೆ ಪುನಃ ಹಿಂದಿನಂತೆ ಪ್ರಾಣಾಯಾಮ, ನ್ಯಾಸ, ಋಷ್ಯಾದಿನ್ಯಾಸ ಮಾಡಿಕೊಂಡು ಧ್ಯಾನಶ್ಲೋಕ ಹೇಳಿ—'ಅನೇನ ಪುರುಷಸೂಕ್ತ ಮಹಾಮಂತ್ರ ಜಪೇನ ಮ.ಭಾ.ಮು. ಪುರುಷನಾಮಕಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್। ಸುಪ್ರೀತೋ ವರದೋ ಭವತು। ಶ್ರೀಕೃಷ್ಣಾರ್ಪಣಮಸ್ತು' ಎಂದು ಹೇಳಿ ನೀರು ಬಿಡಬೇಕು. ಕೊನೆಗೆ ನೀರನ್ನು ನಾರಾಯಣಾಷ್ಟಾಕ್ಷರ ಮಂತ್ರದಿಂದ ಅಭಿಮಂತ್ರಿಸಿ, 'ಸಹಸ್ರ ಶೀರ್ಷಾ....ದಶಾಂಗುಲಂ' ಎಂದು ಪಠಿಸಿ, ಮ.ಭಾ.ಮು. ಪುರುಷನಾಮಕ ಶ್ರೀಲಕ್ಷ್ಮೀನಾರಾಯಣಂ ತರ್ಪಯಾಮಿ ಎಂದು ಒಂದು ಅರ್ಘ್ಯವನ್ನು, 'ಯಜ್ಞೇನ ಯಜ್ಞ ...ಸಂತಿ ದೇವಾಃ' ಎಂದು ಪಠಿಸಿ ಇನ್ನೊಂದು ಅರ್ಘ್ಯವನ್ನು ಕೊಟ್ಟರೂ ಸಾಕು. (ಹೀಗೆಯೇ ಹದಿನಾರು—ಅಥವಾ ಹದಿನೆಂಟು—ಮಂತ್ರಗಳನ್ನು ಹೇಳಿಕೊಂಡು ಉಗಾದಿ ಹಬ್ಬ, ವಿಜಯದಶಮೀ, ಉತ್ತರಾಯಣ ಪುಣ್ಯಪರ್ವಕಾಲ ಇಂಥಾ ದಿವಸಗಳಲ್ಲಿ ಸಾಧ್ಯವಿದ್ದರೆ ಹದಿನಾರು (ಹದಿನೆಂಟು) ಅರ್ಘ್ಯಗಳನ್ನೂ ಕೊಡಬಹುದು.)

ಪುರುಷಸೂಕ್ತದ ಸಂಕ್ಷೇಪಾರ್ಥವನ್ನು ನಮ್ಮ 'ದೇವಪೂಜಾಪದ್ಧತಿ'ಯಲ್ಲಿ ಅಭಿಷೇಕ ಕಲಾಪದಲ್ಲಿ ಕೊಟ್ಟಿದೆ. ಅಲ್ಲದೆ ರಾಘವೇಂದ್ರ ತೀರ್ಥಾದಿ ಐದು ವ್ಯಾಖ್ಯಾನ ಮತ್ತು ವಿವರಣೆಸಹಿತವಾದ 'ಪುರುಷಸೂಕ್ತ ವ್ಯಾಖ್ಯಾನ'ವೂ ಬರೆಯಲ್ಪಟ್ಟಿದೆ. ಅದು ಸದ್ಯದಲ್ಲೇ ಮುದ್ರಣವಾಗಿ ಪ್ರಕಟವಾಗಲಿದೆ. ಆದರಿಂದಲೂ ಸೂಕ್ತಾರ್ಥವನ್ನು ತಿಳಿದುಕೊಂಡು ಪಠಿಸಿದರೆ ಹೆಚ್ಚು ಫಲಕಾರಿಯಾಗುವುದು.

ಇಲ್ಲಿಗೆ ಪುರುಷಸೂಕ್ತ ಮಹಾಮಂತ್ರದ
ಪೀಠಿಕೆ ಮುಗಿಯಿತು

— * — * —

# 8. ವಿಷ್ಣು ಷಡಕ್ಷರ ಮಹಾಮಂತ್ರದ ಪೀಠಿಕೆ

**120.** ಮಂತ್ರೋದ್ಧಾರ—ತಂತ್ರಸಾರದಲ್ಲಿ (೧ ಅ. ಶ್ಲೋ ೪೫) ಈ ಮಂತ್ರಪಾಠವನ್ನು ಹೀಗೆ ಹೇಳಿದ್ದಾರೆ —

**ವಿಷ್ಣು ಶಬ್ದಶ್ಚತುರ್ಥ್ಯಂತೋ ಹೃದಯೇತಃ ಷಡಕ್ಷರಃ।**

(ಅರ್ಥ) ಚತುರ್ಥೀ ವಿಭಕ್ತಿಯ ವಿಷ್ಣು ಶಬ್ದದ ಜೊತೆ (ಎಂದರೆ ವಿಷ್ಣವೇ ಎಂಬುದಕ್ಕೆ) ನಮಃ ಸೇರಿಸಿದರೆ ವಿಷ್ಣು ಷಡಕ್ಷರ ಮಂತ್ರವಾಗುತ್ತದೆ—ಎಂದರೆ ವಿಷ್ಣವೇ ನಮಃ ಎಂಬುದೇ ಆ ಮಂತ್ರ. ಇದರಲ್ಲಿ ಐದೇ ಅಕ್ಷರಗಳಿದ್ದರೂ 'ಷ್ಣವೇ' ಎಂಬುದನ್ನು ಬಿಡಿಸಿ 'ಷಣವೇ' ಎಂದು ಮಾಡಿಕೊಂಡರೆ ಆರು ವರ್ಣವಾಗುತ್ತದೆಯೆಂದು ವರ್ಣನ್ಯಾಸದಲ್ಲಿ ವಿವರಿಸಿದ್ದು ಮುಂದೆ ಬರುವುದು. ಆದರೆ 'ವಿಷ್ಣವೇ ನಮಃ' ಎಂದೇ ಪ್ರಾಣಾಯಾಮದಲ್ಲೂ ಜಪದಲ್ಲೂ ಹೇಳಬೇಕು.

**121.** ನ್ಯಾಸಾದಿಗಳು:—ಈ ಮಂತ್ರಕ್ಕೂ ಋಷಿ, ದೇವತೆ ಎಲ್ಲವೂ ಪ್ರಣವಮಂತ್ರದಂತೆಯೇ ಎಂದು ಹೇಳುತ್ತಾರೆ (೧ ಅ. ೪೬ ಶ್ಲೋ)—

**ತಾರವತ್ ಸರ್ವಮಸ್ಯಾಪಿ, ಶ್ಯಾಮೋ ಧ್ಯೇಯೋ ಹರಿಃ ಸ್ವಯಮ್।**

ಋಷಿ ಛಂದಸ್ಸು ದೇವತೆ ಎಲ್ಲವೂ ಪ್ರಣವಮಂತ್ರದಂತೆಯೇ ತಿಳಿಯಬೇಕು. ಆದರೆ ಧ್ಯಾನದಲ್ಲಿ 'ಉದ್ಯದ್ಭಾಸ್ವತ್ ಸಮಾಭಾಸಃ' ಎಂದು ಹೇಳುವುದಕ್ಕೆ ಪ್ರತಿಯಾಗಿ 'ಇಂದ್ರನೀಲ ಸಮಾಭಾಸಃ' ಎಂದು ಹೇಳಿಕೊಳ್ಳಬೇಕು; ಮಿಕ್ಕದ್ದೆಲ್ಲಾ ಪ್ರಣವಮಂತ್ರದಂತೆಯೇ ಎಂದು ತಿಳಿಸಿದರು.

ಅಂಗನ್ಯಾಸ–ವರ್ಣನ್ಯಾಸಗಳನ್ನು ಆರು ವರ್ಣಗಳಿಂದಲೇ ಷಡಂಗನ್ಯಾಸ ಎಂದು ಹೇಳುತ್ತಾರೆ—

**ವರ್ಣಾಏವ ಷಡಂಗಾನಿ ಷಣಯೋರ್ ಭೇದಯೋಗತಃ॥**

(೧ ಅ. ೪೭ ಶ್ಲೋ)

ಷ್ಣ 'ಷ್ಣವೇ' ಎಂಬಲ್ಲಿ ಭೇದವೆಂಬ ಯುಕ್ತಿಯಿಂದ ಷ–ಣ ಎಂದು ಬಿಡಿಸಿ ಆರು ವರ್ಣಗಳಿಂದ ಷಡಂಗನ್ಯಾಸವನ್ನೂ, ಆರು ವರ್ಣಗಳಿಂದ ಆರು ಸ್ಥಾನಗಳಲ್ಲಿ ವರ್ಣನ್ಯಾಸವನ್ನೂ ಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆ. 'ತಾರವತ್ ಸರ್ವಮಸ್ಯಾಪಿ' ಎಂದದ್ದರಿಂದ 'ವಿಶ್ವ–ತೈಜಸಾದಿ ಆರು ಮೂರ್ತಿಗಳೇ ವಿ–ಷ–ಣ

ಮೊದಲಾದ ಷಡ್ವರ್ಣಗಳಿಂದ ಪ್ರತಿಪಾದ್ಯ (ವಾಚ್ಯ) ದೇವತೆಗಳು ಆದ ಕಾರಣ ವಿ ಮೊದಲಾದ ವರ್ಣಗಳ ಜೊತೆ ಈ ಮೂರ್ತಿಗಳನ್ನು ಸೇರಿಸಿಯೇ ಅಂಗನ್ಯಾಸ ಕರನ್ಯಾಸಗಳನ್ನೂ ವರ್ಣನ್ಯಾಸಗಳನ್ನೂ ಮಾಡಿಕೊಳ್ಳಬೇಕು. ವರ್ಣನ್ಯಾಸವನ್ನು ಯಾವ ಯಾವ ಅಂಗಗಳಲ್ಲಿ ಮಾಡಬೇಕೆಂದರೆ ಹೇಳುತ್ತಾರೆ – (ತಂತ್ರಸಾರ ೧ ಅ. ೪೭ ಶ್ಲೋ) –

ಪಜ್ಜಾನು–ನಾಭಿ–ಹೃನ್ನಾಸಾ – ಕೇಷು ನ್ಯಾಸಶ್ಚವರ್ಣಶಃ॥

ಆರು ವರ್ಣಗಳನ್ನು ಪಾದಗಳು, ಮಂಡಿಗಳು (ಜಾನು), ನಾಭಿ, ಹೃದಯ, ನಾಸಿಕ ಮತ್ತು ಶಿರಸ್ಸು ಈ ಸ್ಥಳಗಳಲ್ಲಿ ನ್ಯಾಸ ಮಾಡಿಕೊಳ್ಳಬೇಕು. ಈಗ ಅನುಷ್ಠಾನಕ್ರಮಕ್ಕೆ ಹೋಗೋಣ.

ಗುರುನಮಸ್ಕಾರದಲ್ಲಿ ೧೧ನೇ ಸ್ಥಾನದಲ್ಲಿ 'ಮಂತ್ರ ದೇವತಾ ಮ.ಭಾ.ಮು. ಶ್ರೀ ವಿಷ್ಣವೇ ನಮಃ॥ ಎಂದು ಹೇಳಬೇಕು. ಪ್ರಾಣಾಯಾಮ – 'ಓಂ ವಿಷ್ಣವೇ ನಮಃ ಓಂ' ಎಂಬ ಮಂತ್ರದಿಂದ.

ಅಂಗನ್ಯಾಸಕ್ಕೂ ವರ್ಣನ್ಯಾಸಕ್ಕೂ ವರ್ಣದೇವತಾ ಧ್ಯಾನ – 'ಮೂರ್ತಯೋಽಷ್ಟಾವಪಿ...ಸರ್ವಾಭರಣಭೂಷಿತಾಃ

## 122. ಕರನ್ಯಾಸ–ಅಂಗನ್ಯಾಸಗಳು –

| ಕ್ರಮ | ಮಂತ್ರ | ಕರನ್ಯಾಸ | ಅಂಗನ್ಯಾಸ |
|---|---|---|---|
| ೧. | ಓಂ ವಿಂ ವಿಶ್ವಾಯ | ಅಂಗುಷ್ಠಾಭ್ಯಾಂ ನಮಃ | ಹೃದಯಾಯ ನಮಃ |
| ೨. | ಓಂ ಷಂ ತೈಜಸಾಯ | ತರ್ಜನೀಭ್ಯಾಂ ನಮಃ | ಶಿರಸೇ ಸ್ವಾಹಾ |
| ೩. | ಓಂ ಣಂ ಪ್ರಾಜ್ಞಾಯ | ಮಧ್ಯಮಾಭ್ಯಾಂ ನಮಃ | ಶಿಖಾಯೈ ವಷಟ್ |
| ೪. | ಓಂ ವೇಂ ತುರ್ಯಾಯ | ಅನಾಮಿಕಾಭ್ಯಾಂ ನಮಃ | ಕವಚಾಯ ಹುಮ್ |
| ೫. | ಓಂ ನಂ ಆತ್ಮನೇ | ಕನಿಷ್ಠಿಕಾಭ್ಯಾಂ ನಮಃ | ನೇತ್ರಾಭ್ಯಾಂವೌಷಟ್ |
| ೬. | ಓಂ ಮಃ ಅಂತರಾತ್ಮನೇ | ಕರತಲಕರಪೃಷ್ಠಾಭ್ಯಾಂ ನಮಃ | ಅಸ್ತ್ರಾಯ ಫಟ್ |

ಓಂ ಭೂರ್ಭುವಸ್ಸುವರೋಮ್ – ಇತಿ ದಿಗ್ಬಂಧಃ (ದಿಙ್ಮುಖಿಃ)

**123. ವರ್ಣನ್ಯಾಸ:** — ಹೆಚ್ಚು ಅವಕಾಶವಿಲ್ಲದಿದ್ದರೆ ಒಂದೇ ನ್ಯಾಸ ಮಾಡಿಕೊಳ್ಳಬಹುದು. ಸಾಧ್ಯವಿದ್ದರೆ ನಾಲ್ಕನ್ನೂ ಮಾಡಿಕೊಳ್ಳಬಹುದು. ಅದಕ್ಕೆ ಕ್ರಮ

| ಕ್ರಮ | ಮಂತ್ರ | ಸೃಷ್ಟಿ(ಬೆಟ್ಟು) | ಸ್ಥಿತಿ (ಬೆಟ್ಟು) | ಲಯ (ಬೆಟ್ಟು) |
|---|---|---|---|---|
| ೧. | ಓಂ ವಿಂ ವಿಶ್ವಾಯ ನಮಃ | ಶಿರಸಿ (ನಡುಬೆಟ್ಟು) | ಶಿರಸಿ (ನಡುಬೆಟ್ಟು) | ಪಾದಯೋಃ ಐದೂಬೆಟ್ಟು |
| ೨. | ಓಂ ಷಂ ತೈಜಸಾಯ ನಮಃ | ನಾಸಯೋಃ (ಅಂಗುಷ್ಠಾನಾಮಿಕಾ) | ನಾಸಯೋಃ (1 + 4) | ಜಾನ್ವೋಃ (ಐದೂಬೆಟ್ಟು) |
| ೩. | ಓಂ ಣಂ ಪ್ರಾಜ್ಞಾಯ ನಮಃ | ಹೃದಯೇ (1 + 5) | ಹೃದಯೇ (1 + 5) | ನಾಭೌ $\frac{2-5}{1}$ ಅಥವಾ $\frac{2-5}{1}$ |
| ೪. | ಓಂ ವೇಂ ತುರ್ಯಾಯ ನಮಃ | ನಾಭೌ $\frac{(2-5)}{1}$ | ಪಾದಯೋಃ ಐದೂ ಬೆಟ್ಟು | ಹೃದಯೇ (1 + 5) |
| ೫. | ಓಂ ನಂ ಆತ್ಮನೇ ನಮಃ | ಜಾನ್ವೋಃ (ಐದೂ ಬೆಟ್ಟು) | ಜಾನ್ವೋಃ (ಐದೂ ಬೆಟ್ಟು) | ನಾಸಯೋಃ (1 + 4) |
| ೬. | ಓಂ ಮಃ ಅಂತರಾತ್ಮನೇ ನಮಃ | ಪಾದಯೋಃ (ಐದೂ ಬೆಟ್ಟು) | ಹೃದಯೇ (1 + 5) | ಶಿರಸಿ (3) |

**124. ಅಂಗುಲಿ ನ್ಯಾಸ:** — ಒಂದು ನ್ಯಾಸವೇ ಸಾಕು

| | | ಸೃಷ್ಟಿ | ಸ್ಥಿತಿ | ಲಯ |
|---|---|---|---|---|
| ೧. | ಓಂ ವಿಷ್ಣವೇ ನಮಃ | ಬಲಗೈ ತರ್ಜನೀ | ಬಲಗೈ ತರ್ಜನೀ | ಎಡಗೈ ತರ್ಜನೀ |
| ೨. | ಓಂ ವಿಂ ವಿಶ್ವಾಯ ನಮಃ | ಬಲಗೈ ನಡುಬೆಟ್ಟು | ಬಲಗೈ ನಡುಬೆಟ್ಟು | ಎಡಗೈ ನಡುಬೆಟ್ಟು |
| ೩. | ಓಂ ಷಂ ತೈಜಸಾಯ ನಮಃ | ಬಲಗೈ ಅನಾಮಿಕಾ | ಬಲಗೈ ಅನಾಮಿಕ | ಎಡಗೈ ಅನಾಮಿಕಾ |
| ೪. | ಓಂ ಣಂ ಪ್ರಾಜ್ಞಾಯ ನಮಃ | ಬಲಗೈ ಕಿರಿಬೆಟ್ಟು | ಬಲಗೈ ಕಿರಿಬೆಟ್ಟು | ಎಡಗೈ ಕಿರಿಬೆಟ್ಟು |
| ೫. | ಓಂ ವೇಂ ತುರ್ಯಾಯ ನಮಃ | ಎಡಗೈ ಕಿರಿಬೆಟ್ಟು | ಎಡಗೈ ತರ್ಜನೀ | ಬಲಗೈ ಕಿರಿಬೆಟ್ಟು |
| ೬. | ಓಂ ನಂ ಆತ್ಮನೇ ನಮಃ | ಎಡಗೈ ಅನಾಮಿಕಾ | ಎಡಗೈ ನಡುಬೆಟ್ಟು | ಬಲಗೈ ಅನಾಮಿಕಾ |
| ೭. | ಓಂ ಮಃ ಅಂತ ರಾತ್ಮನೇ ನಮಃ | ಎಡಗೈ ನಡುಬೆಟ್ಟು | ಎಡಗೈ ಅನಾಮಿಕಾ | ಬಲಗೈ ನಡುಬೆಟ್ಟು |
| ೮. | ಓಂ ವಿಷ್ಣವೇ ನಮಃ | ಎಡಗೈ ತರ್ಜನೀ | ಎಡಗೈ ಕಿರಿಬೆಟ್ಟು | ಬಲಗೈ ತರ್ಜನೀ |

**125. ಋಷ್ಯಾದಿನ್ಯಾಸ:** — ಅಸ್ಯ ಶ್ರೀ ವಿಷ್ಣುಷಡಕ್ಷರ ಮಹಾಮಂತ್ರಸ್ಯ ಅಂತರ್ಯಾಮೀ ಋಷಿಃ (ಶಿರಸಿ) | ಗಾಯತ್ರೀ ಛಂದಃ (ಮುಖೇ) ಮ.ಭಾ.ಮು. ಶ್ರೀ ವಿಷ್ಣುರ್ದೇವತಾ (ಹೃದಯೇ) | ಯಥಾಶಕ್ತಿ ಜಪೇ (ಜಪೋಪ ಸಂಹಾರೇ) ವಿನಿಯೋಗಃ||

**126. ಧ್ಯಾನಮ್:** —

ಹರಿಃ ಓಂ| ಇಂದ್ರ ನೀಲ ಸಮಾಭಾಸಶ್ ಚಿದಾನಂದೈಕದೇಹವಾನ್|
ಚಕ್ರ ಶಂಖಗದಾ ಪದ್ಮ... ಸರ್ವಾಭರಣಭೂಷಿತಾಃ

ಜಪಾರಂಭ — ಮ.ಭಾ.ಮು. ಶ್ರೀ ವಿಷ್ಣುಪ್ರೇರಣಯಾ ಮ.ಭಾ.ಮು. ಶ್ರೀವಿಷ್ಣು ಪ್ರೀತ್ಯರ್ಥಂ ಯಥಾಶಕ್ತಿ ವಿಷ್ಣುಷಡಕ್ಷರ ಮಹಾಮಂತ್ರಜಪಂ ಕರಿಷ್ಯೇ ಎಂದು ಸಂಕಲ್ಪ ಮಾಡಿ ೧೨, ೨೪, ೩೬, ೧೦೮ ಎಷ್ಟು ಸಾಧ್ಯವೋ ಅಷ್ಟು ಜಪ ಮಾಡಬಹುದು.

ಜಪ ಸಮಾಪ್ತಿ — ಪುನಃ ಪ್ರಾಣಾಯಾಮ, ಕರನ್ಯಾಸ–ಅಂಗನ್ಯಾಸ, ವರ್ಣನ್ಯಾಸ, ಅಂಗುಲಿನ್ಯಾಸ ಋಷ್ಯಾದಿನ್ಯಾಸಗಳನ್ನು ಮಾಡಿ ಧ್ಯಾನಶ್ಲೋಕಗಳನ್ನು ಪಠಿಸಿ 'ಅನೇನ ಯಥಾಶಕ್ತಿ ವಿಷ್ಣುಷಡಕ್ಷರ ಮಹಾಮಂತ್ರಜಪೇನ ಭಗವಾನ್ ಮ.ಭಾ.ಮು. ಶ್ರೀವಿಷ್ಣುಃ ಪ್ರೀಯತಾಮ್| ಸುಪ್ರೀತೋ ವರದೋ ಭವತು| ಶ್ರೀಕೃಷ್ಣಾರ್ಪಣಮಸ್ತು' ಎಂದು ನೀರು ಬಿಟ್ಟು ಅರ್ಘ್ಯಪ್ರದಾನವನ್ನೂ ಮಾಡಬೇಕು.

**127. ವಿಷ್ಣು ಶಬ್ದಾರ್ಥ:** — ಐತರೇಯೋಪನಿಷತ್ತಿನ ಇಡೀ ಮೂರನೇ ಆರಣ್ಯಕದ ಎರಡು ಅಧ್ಯಾಯಗಳ ಹನ್ನೆರಡು ಖಂಡಗಳೂ ಪ್ರಾಯಶಃ ವಿಷ್ಣು ಶಬ್ದದ ವ್ಯಾಖ್ಯಾನ ರೂಪವೇ ಆಗಿವೆ. ಇದರ ಸಾರಾಂಶ ಭಾಗವನ್ನು ನಾವು ನಖಸ್ತುತಿಯ ವಿವರಣೆಯಲ್ಲಿ 'ವಿಷ್ಣು ಶಬ್ದಾರ್ಥ' ಎಂಬ ಭಾಗದಲ್ಲಿ (ಪುಟ ೩೦೮–೩೪) ವಿಸ್ತಾರವಾಗಿ ಕೊಟ್ಟಿದ್ದೇವೆ. ಅಲ್ಲದೆ ವಾಯುಸ್ತುತಿಯ 'ಶ್ರೀಮದ್ವಿಷ್ಣ್ವಂಘ್ರಿ' ಎಂಬ ಮೊದಲನೇ ಶ್ಲೋಕದಲ್ಲೂ ವಿಷ್ಣು ಶಬ್ದಕ್ಕೆ ೧೨–೧೩ ಅರ್ಥಗಳನ್ನು ವಿವರಿಸಿದ್ದೇವೆ (ವಾಯುಸ್ತುತಿ ಎರಡನೇ ಭಾಗ, ಪುಟ ೩೫ರಿಂದ ೮೦). ಆದರೆ ಇಲ್ಲಿ ಕೆಲವು ಅತಿಮುಖ್ಯ ವಿಚಾರಗಳನ್ನು ಹೇಳಿ ಮುಗಿಸುತ್ತೇವೆ.

ಐತರೇಯೋಪನಿಷತ್ತಿನಲ್ಲಿ ೩ನೇ ಆರಣ್ಯಕದ ಎರಡನೇ ಅಧ್ಯಾಯದ ಆರನೇ ಖಂಡದಲ್ಲಿ ವಿಷ್ಣು ಶಬ್ದಾರ್ಥವನ್ನು ಹೀಗೆ ವಿವರಿಸಿದೆ — ಣ **ಕಾರೋ** ಬಲಂ ಷಕಾರಃ ಪ್ರಾಣ ಆತ್ಮಾ. ವಿಷ್ಣು ಶಬ್ದದಲ್ಲಿರುವ ಮೊದಲನೆಯ ಉಪಪದವು ಉಪಸರ್ಗದಂತಿದೆ, ಕಡೆ 'ಉ'ಕಾರವು ಪ್ರತ್ಯಯ. ಇನ್ನು ಷ-ಣಗಳೇ ಅದರ ಜೀವಾಳ; ಆದ್ದರಿಂದ ಉಪನಿಷತ್ತು ಆ ಎರಡು ವರ್ಣಗಳ ಅರ್ಥವನ್ನೇ ವಿವರಿಸುತ್ತದೆ — ಣ

ಕಾರೋ ಬಲಮ್–ಣಕಾರವು ಆ ಭಗವಂತನ ಅಪರಿಮಿತ ಬಲವನ್ನು ಸೂಚಿಸುತ್ತದೆ. ಷಕಾರವು ಎರಡು ಪ್ರಮೇಯಗಳನ್ನು ಹೇಳುತ್ತದೆ (ಕ) ಪ್ರಾಣಃ—ಅನ ಚೇಷ್ಟಾಯಾಂ ಎಂದು ಧಾತು ಪಾಠವಿರುವುದರಿಂದ ಪ್ರ + ಅನ = ಪ್ರಾಣ ಎಂದರೆ ರಮಾ ಬ್ರಹ್ಮಾದಿ ಸಕಲರ ಪ್ರೇರಕತ್ವ ಎಂದರ್ಥ. ಆತ್ಮ ಶಬ್ದವು ಆ ಉಪಸರ್ಗ, ತನು ವಿಸ್ತಾರೇ ಎಂಬ ಧಾತುವಿನ ರೂಪಾಂತರವಾಗಿದ್ದು ದೇಶತಃ ಕಾಲತಃ ಗುಣತಃ ಪರಿಪೂರ್ಣತ್ವವನ್ನು ಹೇಳುತ್ತದೆ. 'ವಿ' ಎಂಬ ಉಪಪದವು 'ವೀತ್ಯುಕ್ತಸ್ಯ ವಿಶಿಷ್ಟತಾ' ಎಂಬ ಭಾಷ್ಯವಾಕ್ಯದಂತೆ ವಿಶಿಷ್ಟತ್ವವನ್ನು—ಬೇರೆ ಯಾರಲ್ಲೂ ಇಲ್ಲದ ಹೆಚ್ಚುಗಾರಿಕೆಯನ್ನು ತೋರಿಸುತ್ತದೆ. ಭಾಷ್ಯದಲ್ಲಿ ಹೇಳಿದಂತೆ 'ಅಂತ್ಯಸ್ಥಿತ ಉಕಾರಸ್ತು ತಾಚ್ಛೀಲ್ಯಾದಿ ಹರೇರ್ವದೇತ್' ಕಡೆಯಲ್ಲಿರುವ ಉಕಾರವು ಈ ಎಲ್ಲ ಗುಣಗಳೂ ಆ ಶ್ರೀಹರಿಯಲ್ಲಿ ಸ್ವಾಭಾವಿಕವಾಗಿ ಬಂದ ಸಹಜ ಗುಣಗಳೆಂಬುದನ್ನು (ತಾಚ್ಛೀಲ್ಯವನ್ನು) ಹೇಳುತ್ತದೆ. ಆದ್ದರಿಂದ ಇದರಂತೆ ವಿಷ್ಣು ಎಂದರೆ ಎಲ್ಲರಿಗಿಂತಲೂ ಅತಿಶಯವಾದ ಮತ್ತು ಎಲ್ಲರಿಗಿಂತಲೂ ವಿಲಕ್ಷಣವಾದ ಅನಂತ ಬಲವನ್ನು ಸಹಜವಾಗಿ–ಸ್ವಾಭಾವಿಕವಾಗಿ ಅನಾದಿ ನಿತ್ಯಕಾಲದಲ್ಲೂ ಹೊಂದಿರುವವನೆಂದೂ, ರಮಾಬ್ರಹ್ಮಾದಿ ಸಕಲ ಚೇತನಾಚೇತನಾತ್ಮಕ ಜಗತ್ತಿಗೆ ಪ್ರೇರಕನಾಗಿರುವವನೂ ಮತ್ತು ದೇಶತಃ ಕಾಲತಃ ವ್ಯಾಪ್ತವಾದ ಅನಂತಗುಣ ಪರಿಪೂರ್ಣನೆಂದೂ ಅರ್ಥ ಹೇಳಿದಂತಾಯಿತು. ಈ ಅರ್ಥವನ್ನು ತಿಳಿದುಕೊಂಡರೆ ಸಕಲ ವೇದಗಳ ಮತ್ತು ಪುರಾಣಾದಿ ಸಮಸ್ತ ಶಾಸ್ತ್ರಗಳ ಸಾರಾರ್ಥವನ್ನೇ ತಿಳಿದುಕೊಂಡಂತೆ ಆಗುತ್ತದೆಯೆಂದು ಐತರೇಯ ಭಾಷ್ಯದಲ್ಲೇ ಹೇಳಿದೆ

**'ವೇದಾ–ನನ್ಯಾನ್ ಪುರಾಣಾನ್ ವಾ ತೇನ ವಿಷ್ಣುಪದೋದಿತಃ।**
**ಅವಾಪ್ತೋ ಭಗವಾನ್ ಯಸ್ಮಾತ್ ತನ್ನಾಮಾರ್ಥಾಯತೋಽಖಿಲಾಃ॥**
**ಇತ್ಯಾಹುರ್ ಋಷಯಃ ಸರ್ವೇ।**

ಹೀಗೆ ಮಹರ್ಷಿಗಳೇ ಹೇಳುತ್ತಾರೆ.

**'ಏಷ ಏವ ಹಿ ಸರ್ವೇಷಾಂ ವೇದಾನಾಮರ್ಥ ಈರಿತಃ'**

ಇದೇ ಸಕಲ ವೇದಗಳ ಸಾರಾರ್ಥವೆಂದು ಮಹಾಜ್ಞಾನಿಗಳಿಂದ ಹೇಳಲ್ಪಟ್ಟಿದೆ.

**'ವಿಷ್ಣುನಾಮೋದಿತೋ ಯೋಽರ್ಥಸ್ ತದ್ವ್ಯಾಖ್ಯಾನ್ಯದ್ ವಚೋಽಖಿಲಮ್'**

ವಿಷ್ಣುನಾಮವು ಏನು ಅರ್ಥ ಹೇಳುತ್ತದೋ ಅದರ ವ್ಯಾಖ್ಯಾನವೇ ಮಿಕ್ಕ ಸಮಗ್ರ ಸಾಹಿತ್ಯ ವಾಙ್ಮಯವೂ ಆಗಿದೆ.

ಇನ್ನು 'ಆದಿತ್ಯಾನಾಮಹಂ ವಿಷ್ಣುಃ' (೧೦ । ೨೧) ಎಂಬ ಗೀತಾವಾಕ್ಯಕ್ಕೆ ಅರ್ಥ ಹೇಳುವಾಗಲೂ ಶ್ರೀಮದಾಚಾರ್ಯರು ವಿಷ್ಣು ಶಬ್ದದ ನಿರುಕ್ತಿಯನ್ನು ತೋರಿಸಿದ್ದಾರಲ್ಲದೆ ಅದಕ್ಕೆ 'ಮೋಕ್ಷ ಧರ್ಮದ ಪ್ರಮಾಣವನ್ನೂ

ಉದಹರಿಸಿದ್ದಾರೆ. ಆದರ ಅರ್ಥವನ್ನು ಗೀತಾವಿವೃತ್ತಿಯಲ್ಲಿ ರಾಯರು ಹೀಗೆ ಹೇಳಿದ್ದಾರೆ — ೧. ಸರ್ವತ್ರ ವ್ಯಾಪ್ತತ್ವಾತ್ ಸರ್ವೇಷು ಪ್ರವಿಷ್ಟತ್ವಾದ್ವಾ ವಿಷ್ಣುಃ। ೧. ಬ್ರಹ್ಮಾಂಡದ ಒಳಗೆ ಹೊರಗೆಲ್ಲಾ ವ್ಯಾಪಿಸಿಕೊಂಡಿರುವುದರಿಂದಲೂ ೨. ಎಲ್ಲ ಪ್ರಾಣಿಗಳಲ್ಲೂ ಎಲ್ಲ ಲೋಕಗಳಲ್ಲೂ ಪ್ರವೇಶ ಮಾಡಿ ನಿಯಮನ ಮಾಡುವುದರಿಂದಲೂ ಅವನಿಗೆ ವಿಷ್ಣು ಎಂದು ಹೆಸರು. 'ವಿಷಲ್ಯ ವ್ಯಾಪ್ತೌ' ಎಂಬ ಧಾತುವಿನ (ಜುಹೋ ಉಭ ಮೇಲೆ, ಕ್ನು ಪ್ರತ್ಯಯ ಬಂದಿದೆ. 'ವಿಶ ಪ್ರವೇಶನೇ' ಎಂಬ [ತುದಾದಿ ಪರ] ಧಾತುವಿನ ಮೇಲೆ ಕ್ಸ್ನು ಪ್ರತ್ಯಯವು ಬಂದಿದೆ. ಮುಂದಿನ ಈ ಅರ್ಥಗಳನ್ನು ಶ್ರೀಸತ್ಯಧರ್ಮರು ತತ್ವ ಸಂಖ್ಯಾನ ಟಿಪ್ಪಣಿಯಲ್ಲಿ 'ಸ್ವತಂತ್ರೋ ಭಗವಾನ್ ವಿಷ್ಣುಃ' ಎಂಬುದಕ್ಕೆ ಅರ್ಥ ಹೇಳುವಾಗ ತೋರಿಸಿದ್ದಾರೆ — ೩. ವಿಯಂತ್ಯನೇಸ ಜನಾ ಮೋಕ್ಷಂ ಪ್ರತೀತಿ ವಾ, ಯಾರಿಂದ (ಯಾರ ಅನುಗ್ರಹದಿಂದ) ಜನಗಳು ಮೋಕ್ಷಕ್ಕೆ ಹೋಗುತ್ತಾರೋ ವೀ–ಹೋಗು ಧಾತು; ೪. ವೇತಿ –ಅತಿಶಯೇನ ಪ್ರಕಾಶತ ಇತಿ ವಾ, ಕೋಟಿ ಸೂರ್ಯರಿಗೂ ಅಧಿಕವಾಗಿ ಪ್ರಕಾಶಿಸುವುದರಿಂಬಲೂ (ವೀ = ಪ್ರಕಾಶಿಸು ಧಾತು); ೫. ವೇತಿ = ವಿಶೇಷಣ ಆಕ್ರಾಮತೀತಿ ವಾ. ತ್ರಿವಿಕ್ರಮ ರೂಪದಿಂದ ಮೂರು ಲೋಕಗಳನ್ನೂ ವ್ಯಾಪಿಸಿದ್ದರಿಂದಲೂ ೬. ವೇತಿ–ಗಚ್ಛತ್ಯನೇನ ಸರ್ವಭೂತಜಾತಮಿತಿ ವಾ ವಿಷ್ಣುಃ ಸಕಲ ಪ್ರಾಣಿಗಳೂ ಯಾರ ಪ್ರೇರಣೆಯಿಂದ ಚಲಿಸುತ್ತವೋ ( ತೇನ ವಿನಾ ತೃಣಮಪಿ ನ ಚಲತಿ) ಅವನು ವಿಷ್ಣು — ಇವುಗಳೆಲ್ಲಾ ಗೀತಾಭಾಷ್ಯೋದಾಹೃತವಾದ ಈ ಮೋಕ್ಷ ಧರ್ಮ ವಚನದ ಅರ್ಥಗಳು —

**ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ।**
**ವ್ಯಾಪ್ತೌ ಮೇ ರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಮಮ ॥ ೧ ॥**
**ಅಧಿಭೂತನಿವಿಷ್ಟಶ್ಚ ತದಿಚ್ಛುಶ್ಚಾಸ್ಮಿ ಭಾರತ।**
**ಕ್ರಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿ ಸಂಜ್ಞಿತಃ ॥ ೨ ॥**

(ಅರ್ಥ) ಹೇ ಭಾರತ! ಪೃಥಿವ್ಯಾದಿ ಪಂಚಭೂತಗಳಿಗೂ ಬ್ರಹ್ಮರುದ್ರಾದಿ ಸಕಲ ಪ್ರಾಣಿವರ್ಗಕ್ಕೂ ನಾನು ಗತಿಪ್ರದನಾದ್ದರಿಂದಲೂ, ನನ್ನ ಸ್ವರೂಪವು ಸ್ವರ್ಗ ಭೂಮ್ಯಾದಿ ಸಕಲ ಬ್ರಹ್ಮಾಂಡವನ್ನೂ ವ್ಯಾಪಿಸಿರುವುದರಿಂದಲೂ. ಅತ್ಯಧಿಕವಾದ ಪ್ರಕಾಶವುಳ್ಳವನಾದ್ದರಿಂದಲೂ ಜೀವರಿಗೆ ಉಪಕಾರಿಗಳಾದ ವಸ್ತುಗಳಲ್ಲಿ ಪ್ರವೇಶಿಸಿರುವುದರಿಂದಲೂ ಅಧಿಭೂತಗಳಿಗೆ ಜನ್ಮ ಮರಣಾದಿಗಳನ್ನು ಇಚ್ಛಿಸುವುದರಿಂದಲೂ ಮೂರು ಲೋಕಗಳನ್ನು (ತ್ರಿವಿಕ್ರಮರೂಪದಿಂದ) ವ್ಯಾಪಿಸಿದ್ದರಿಂದಲೂ ನಾನು ವಿಷ್ಣು ಎಂಬ ಹೆಸರುಳ್ಳವನಾಗಿದ್ದೇನೆ. (ಇದಕ್ಕೆ ಸಂಬಂಧಿಸಿದ ವ್ಯಾಕರಣ ವಿಶೇಷಗಳಿಗೆ ವಾಯುಸ್ತುತಿ ವ್ಯಾಖ್ಯಾನ ನೋಡಿ).

ವಿಷ್ಣವೇ ನಮಃ ಎಂಬಲ್ಲಿರುವ ನಮಃ ಶಬ್ದಾರ್ಥ ನಾರಾಯಣಾಷ್ಟಕ್ಷರ (51ನೇ) ಮಂತ್ರದ ವಿವರಣೆಯಲ್ಲೇ ಕೊಟ್ಟಿದ್ದೇವೆ. ಆದ್ದರಿಂದ ಅಲ್ಲೇ ನೋಡಿಕೊಳ್ಳಿ.

**128. ಉಪಸಂಹಾರ:** — ಈ ಅಷ್ಟಮಹಾಮಂತ್ರಗಳನ್ನು ಯಾವ ಕ್ರಮದಲ್ಲಿ ಹೇಳಿಕೊಳ್ಳಬೇಕೆಂಬುದಕ್ಕೆ ಈ ಶ್ಲೋಕವಿದೆ. ಅದನ್ನು ಹೇಳಿಕೊಂಡು ಜಪವನ್ನು ಮುಗಿಸಬಹುದು —

**ಪ್ರಣವೋಽಷ್ಟೌ ವ್ಯಾಹೃತಯೋ ದ್ವಿಷಟ್–ಸಾವಿತ್ರ್ಯ–ಮಾತೃಕಾಃ।**
**ಪೌರುಷೋ ವೈಷ್ಣವಶ್ಚೇತಿ ಜಪೇ ಕ್ರಮ ಉದಾಹೃತಃ॥**

ಈ ಶ್ಲೋಕದ ಅರ್ಥವನ್ನು ಪ್ರಾರಂಭದಲ್ಲೇ (೯ನೇ ಖಂಡದಲ್ಲಿ) ವಿವರಿಸಲಾಗಿದೆ. ಇದನ್ನು ಹೇಳಿಕೊಂಡನಂತರ ತಂತ್ರಸಾರದಲ್ಲಿ (೧ ಅ.) ಹೇಳಿದ ಈ ಶ್ಲೋಕಗಳನ್ನೂ ಹೇಳಿಕೊಳ್ಳಬಹುದು —

**ಏತೇ ತು ಸರ್ವಮಂತ್ರಾಣಾಂ ಮೂಲಮಂತ್ರಾ ವಿಶೇಷತಃ।**
**ಏತದ್‌ಜ್ಞಾನಾತ್ ಸಮಸ್ತಂ ಚ ಜ್ಞಾತಂ ಸ್ಯಾಚ್ಛಬ್ದಗೋಚರಮ್॥**
**ಏತಜ್ಜಪಾತ್ ಸಮಸ್ತಾನಾಂ ಮಂತ್ರಾಣಾಂ ಜಾಪಕೋ ಭವೇತ್ ॥**

ಇವುಗಳ ಅರ್ಥವನ್ನೂ ಪ್ರಾರಂಭದಲ್ಲೇ (ಖಂಡ ೯ರಲ್ಲಿ) ವಿವರಿಸಿದ್ದೇವೆ.

ಎಲ್ಲಾ ಜಪ ಮುಗಿದ ಬಳಿಕ ಕೊನೆಯಲ್ಲಿ ಮೊದಲು ಮಾತೃಕಾ ನ್ಯಾಸವನ್ನೂ ಆಮೇಲೆ ತತ್ತ್ವನ್ಯಾಸವನ್ನೂ ಮಾಡಿ ಅನಂತರ "ಯಸ್ಯ ಸ್ಮೃತ್ಯಾ ಚ" ಹೇಳಿಕೊಂಡು ಶ್ರೀ ಹರಿಯಲ್ಲಿ ಸಮರ್ಪಣೆ ಮಾಡಬೇಕು.

ಛಲಾರೀ ಟೀಕಾಕಾರರೂ ಕುಂಭಕೋಣದ ಅಷ್ಟ ಮಹಾಮಂತ್ರ ವಿಧಿಯನ್ನು ಮುದ್ರಿಸಿದವರೂ, ಮಾಧ್ವಮಂತ್ರ ರತ್ನಾಕರವನ್ನು ರಚಿಸಿದ ಟಿ. ಆರ್. ಕೃಷ್ಣಾಚಾರ್ಯರೂ ಎಲ್ಲರೂ ಈ ಅಷ್ಟಮಹಾಮಂತ್ರಗಳನ್ನು ತ್ರಿಕಾಲದಲ್ಲೂ ಮಾಡಬೇಕು ಎಂದು ಹೇಳುತ್ತಾರೆ. ಎಂಟು ಮಂತ್ರಗಳನ್ನೂ ದಿನಕ್ಕೆ ಒಂದಾವರ್ತಿ ಮಾಡಿಕೊಳ್ಳುವುದೇ ದುಸ್ತರವಾಗಿರುವಾಗ ಮೂರು ಹೊತ್ತೂ ಮಾಡಿಕೊಳ್ಳುವುದು ಯಾರೋ ಕೋಟಿಗೊಬ್ಬ ಮಹಾತ್ಮರಿಗೆ ಸಾಧ್ಯವಾಗಬಹುದು. ಆದರೆ ಅದರಿಂದ ನಮಗೆ ಇನ್ನೊಂದು ಹೊಸ ವಿಷಯ ತಿಳಿಸಿದಂತಾಗಿದೆ. ಈ ಅಷ್ಟ ಮಹಾಮಂತ್ರಗಳನ್ನು ಭೋಜನಾನಂತರದಲ್ಲೂ ಮಾಡಿಕೊಳ್ಳಬಹುದು ಎಂದು ಹೇಳಿದಂತಾಯಿತಲ್ಲವೆ. ಆದ್ದರಿಂದ ಕ್ವಚಿತ್ ಲೌಕಿಕ ಕೆಲಸಗಳಿಂದ ಬೆಳಗ್ಗೆ ಈ ಮಂತ್ರಗಳನ್ನು ಮಾಡಿಕೊಳ್ಳಲು ಸುತರಾಂ ಸಾಧ್ಯವಿಲ್ಲದಿದ್ದರೆ ರಾತ್ರಿಯೂ ಮಾಡಿಕೊಳ್ಳಬಹುದು — ತಪ್ಪಲ್ಲ ಎಂದು ಹೇಳಿದಂತಾಯಿತು. ಆದ್ದರಿಂದ ಕೈಲಾದಮಟ್ಟಿಗೆ ಬೆಳಗ್ಗೆ ಮಾಡಿಕೊಳ್ಳುವುದು ಉತ್ತಮ ಪಕ್ಷ. ಆಗದಿದ್ದರೆ ಮಧ್ಯಾಹ್ನದ ಮೇಲೋ ರಾತ್ರಿಯೋ ಯಾವಾಗ ಅನುಕೂಲವಾಗುವುದೋ ಆಗಲೇ ಮಾಡಿಕೊಳ್ಳಬಹುದು. ಒಂದೇ ದಿನ ಎಂಟೂ ಮಂತ್ರಗಳನ್ನು ಮಾಡಿಕೊಳ್ಳಲು ಸಾಧ್ಯವಿಲ್ಲದಿದ್ದರೆ ದಿನಕ್ಕೆ ಒಂದರಂತೆ ಸರದಿಯ ಮೇಲೂ ಮಾಡಿಕೊಳ್ಳಲು

ಬರುತ್ತದೆ. ಅದೂ ಸಾಧ್ಯವಿಲ್ಲದಿದ್ದರೆ ಈ ಅಷ್ಟಮಹಾಮಂತ್ರಗಳ ವಿಚಾರವನ್ನಾದರೂ ಓದಿ ತಿಳಿದುಕೊಳ್ಳಿ. ಅಷ್ಟು ಮಾಡಿದರೂ ಭಗವಂತ ಪ್ರಸನ್ನನಾಗುತ್ತಾನೆ ಎಂಬುದಕ್ಕೆ ಆಚಾರ್ಯರೇ ಸಾಕ್ಷಿ. ತಂತ್ರಸಾರದಲ್ಲಿ ಕಡೆಯಲ್ಲಿ ಈ ಶ್ಲೋಕ ಹೇಳಿದ್ದಾರೆ—

**ಗ್ರಂಥೋಽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ।**
**ಕಿಮು ಜ್ಞಾನಾ–ದನುಷ್ಠಾನಾತ್ ಉಭಯಸ್ಮಾತ್ ಪುನಃ ಕಿಮು॥**

(ಅರ್ಥ) ಈ ತಂತ್ರಸಾರ ಗ್ರಂಥವನ್ನು ಸುಮ್ಮನೆ ಪಠಿಸಿದರೇ ಸಾಕು, ಸಕಲಾಭೀಷ್ಟಗಳೂ ಸಿದ್ಧಿಸುತ್ತವೆ. ಇನ್ನು ಅರ್ಥವನ್ನೂ ತಿಳಿದುಕೊಂಡರೆ ಹೇಳುವುದೇನಿದೆ? ಅದಕ್ಕೂ ಮುಂದೆ ಹೋಗಿ ಯಥಾಶಕ್ತಿ ಅನುಷ್ಠಾನವನ್ನೂ ಮಾಡಿದರೆ ಇನ್ನೂ ಉತ್ತಮವೆಂದು ಹೇಳಬೇಕೇನು? ಹೀಗಿರುವಾಗ ಯಥಾಶಕ್ತಿ ಅರ್ಥವನ್ನೂ ತಿಳಿದುಕೊಂಡು ಅನುಷ್ಠಾನವನ್ನೂ ಮಾಡಿದರೆ ಮತ್ತೇನು ಹೇಳಬೇಕು?

ಇದರಲ್ಲಿ ಉತ್ತರಾರ್ಧ ಮಾತ್ರ ನಮ್ಮ ಗ್ರಂಥಕ್ಕೂ ಅನ್ವಯಿಸುತ್ತದೆ ಎಂದು ಹೇಳಿ ಈ ಪೀಠಿಕೆಯನ್ನು ಮುಗಿಸಿ ಶ್ರೀ ಕೃಷ್ಣಾರ್ಪಣಮಸ್ತು ಎನ್ನುತ್ತೇವೆ.

## ಸಮರ್ಪಣೆ

**ಪ್ರಣವಾದ್ಯಷ್ಟಮಂತ್ರಾಣಾಂ ಜಪನ್ಯಾಸಾದಿಕೋ ವಿಧಿಃ।**
**ಕಥಿತೋ ವಿಷ್ಣುತೀರ್ಥೇನ ತಂತ್ರಸಾರೋಕ್ತ–ಮಾರ್ಗತಃ ॥ ೧ ॥**

(ಅರ್ಥ) ಪ್ರಣವಾದ್ಯಷ್ಟಮಹಾಮಂತ್ರಗಳ ಜಪನ್ಯಾಸಾದಿ ಕ್ರಮವನ್ನು ತಂತ್ರಸಾರೋಕ್ತ ರೀತಿಯಾಗಿ ಯಥಾಮತಿ ವಿಷ್ಣುತೀರ್ಥನೆಂಬ ಈ ವ್ಯಕ್ತಿ ವಿವರಿಸಿದ್ದಾನೆ.

**ಪಠನಾದ್ಧಾರಣಾದ್ವಾಪಿ ಹ್ಯನುಷ್ಠಾನಾದ್ ಯಥಾಮತಿ ।**
**ಮಧ್ವೇಶಃ ಶ್ರೀ ಹರಿಸ್ತುಷ್ಟೋ ಪ್ರೀಯತೇ ನಾತ್ರ ಸಂಶಯಃ ॥ ೨ ॥**

(ಅರ್ಥ) ಇದನ್ನು ಓದುವುದರಿಂದಲೂ, ವಿಷಯಗ್ರಹಣ ಮಾಡುವುದರಿಂದಲೂ ಯಥಾಶಕ್ತಿ ಅನುಷ್ಠಾನ ಮಾಡುವುದರಿಂದಲೂ ಮಧ್ವವಲ್ಲಭನಾದ ಶ್ರೀ ಹರಿಯು ಅವಶ್ಯವಾಗಿ ಪ್ರೀತನಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

**ಶ್ರೀ ಕೃಷ್ಣಾರ್ಪಣ ಮಸ್ತು**

# ಅಷ್ಟಮಹಾಮಂತ್ರಗಳು

## ಉತ್ತರ ಭಾಗ

# ಅನುಷ್ಠಾನ ಕ್ರಮಗಳು

### ಲೇಖಕನ ಮಂಗಳಾಚರಣೆ

ಶ್ರೀ ಗುರುಭ್ಯೋ ನಮಃ । ಹರಿಃ ಓಂ॥

**ನಾರಾಯಣಂ ಗುಣೈಃ ಸರ್ವೈ — ರುದೀರ್ಣಂ ದೋಷವರ್ಜಿತಮ್।**
**ಪ್ರಣಮಾಮಿ ರಮಾಕಾಂತಂ ಮಧ್ವಹೃತ್ಪದ್ಮವಾಸಿನಮ್॥೧॥**

(ಅರ್ಥ) ಸಕಲಗುಣಪರಿಪೂರ್ಣನಾದ, ಸಕಲವಿಧವಾದ ದೋಷಗಳಿಂದಲೂ ದೂರನಾದ, ಲಕ್ಷ್ಮೀಪತಿಯೂ, ಶ್ರೀಮನ್ಮಧ್ವಾಚಾರ್ಯರ ಹೃದಯನಿವಾಸಿಯೂ ಆದ ಶ್ರೀಮನ್ನಾರಾಯಣನನ್ನು ಭಕ್ತ್ಯತಿಶಯದಿಂದ ನಮಸ್ಕರಿಸುತ್ತೇನೆ.

**ಪ್ರಣಮ್ಯ ಶ್ರೀಮದಾನಂದ —ತೀರ್ಥಾದಿ ಗುರುಶೇಖರಾನ್।**
**ತತ್ ಕೃಪಾದೃಷ್ಟಿಪೂತೋಽಹಂ ತದನುಗ್ರಹಸಿದ್ಧಯೇ॥೨॥**

(ಅರ್ಥ) ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೇ ಮೊದಲಾದ ಸಮಸ್ತ ಗುರುಶ್ರೇಷ್ಠರಿಗೂ ವಂದಾನಾಸಮರ್ಪಣೆ ಮಾಡಿ ಅವರೆಲ್ಲರ ಕೃಪಾದೃಷ್ಟಿಯ ಬಲದಿಂದ ಅನುಗ್ರಹೀತನಾದ ನಾನು— ಅವರೆಲ್ಲರ ಅನುಗ್ರಹಸಿದ್ಧಿಗಾಗಿ,

**ವಕ್ಷ್ಯಾಮಿ ಮೂಲಮಂತ್ರಾಣಾಂ ಜಪಾನುಷ್ಠಾನ ಸದ್ವಿಧಿಮ್।**
**ಸರ್ವೇಷಾಂ ಸುಖಬೋಧಾಯ ಯಥಾಧೀತಂ ಯಥಾಮತಿ॥೩॥**

(ಅರ್ಥ) ಎಲ್ಲರಿಗೂ ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ನನಗೆ ಉಪದೇಶವಾದ ರೀತಿಯಲ್ಲೇ ಪ್ರಣವಾದಿ ಅಷ್ಟಮೂಲಮಹಾಮಂತ್ರಗಳ ಜಪಾನುಷ್ಠಾನದ ಉತ್ತಮವಾದ ವಿಧಾನವನ್ನು ನನಗೆ ತಿಳಿದ ಮಟ್ಟಿಗೆ ಹೇಳುತ್ತೇನೆ.

— * — * —

# ೧. ಗುರುಮಂತ್ರ

## ೧. ಮಂಗಳಾಚರಣ ಶ್ಲೋಕಗಳು

ಶ್ರೀ ಗುರುಭ್ಯೋ ನಮಃ । ಹರಿಃ ಓಮ್ । ।

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥೧॥

ಸರ್ವವಿಘ್ನ ಪ್ರಶಮನಂ ಸರ್ವಸಿದ್ಧಿಕರಂ ಪರಮ್।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್॥೨॥

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತ ಪ್ರವರೋ ಹಿ ಯಃ।
ಶ್ರೀಮದಾನಂದ ತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ ॥೩॥

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ॥೪॥

## ೨. ಭೂತೋಚ್ಚಾಟನಮ್

ಅಪಸರ್ಪಂತ್ವಿತಿ ಭೂತೋಚ್ಚಾಟನ ಮಂತ್ರಸ್ಯ ಮಮ ಶರೀರಸ್ಯ ಅಂತರ್ಯಾಮೀ ಋಷಿಃ (ಶಿರಸಿ) । ಪ್ರಕೃತಿಶ್ಛಂದಃ (ಮುಖೇ)। ಸತ್ಯೋ ದೇವತಾ (ಹೃದಯೇ) । ಸಮಸ್ತ ಭೂತೋಚ್ಚಾಟನೇ ವಿನಿಯೋಗಃ ।

ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ।
ಯೇ ಭೂತಾ ವಿಘ್ನಕರ್ತಾರಸ್ ತೇ ನಶ್ಯಂತು ಶಿವಾಜ್ಞಯಾ॥೧॥

ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವತು ರಾಕ್ಷಸಾಃ ।
ಯಾತುಧಾನಾಃ ಪಿಶಾಚಾಶ್ಚ ಹ್ಯನ್ಯೇ ಚ ವಿಬುಧೇತರಾಃ ॥೨॥

ಯೇ ಚಾನ್ಯೇ (ಚಾತ್ರ) ನಿವಸಂತೀಹ ದೇವತಾ ಭುವಿ ಸಂಸ್ಥಿತಾಃ।
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮಸಮಾರಭೇ ॥೩॥

(ಪಾಠಾಂ ಸರ್ವೇಷಾಮಪ್ಯವಿರೋಧೇನ)

ಇತಿ ವಾಮಭಾಗೇ ಛೋಟಿಕಾ ಮುದ್ರಯಾ ಸಮಸ್ತ ಭೂತೋಚ್ಚಾಟನಂ ಕುರ್ಯಾತ್।

(ಎಡಗಡೆ ಚುಟುಕಿ ಹೊಡೆದು ಸಕಲ ಭೂತಪ್ರೇತಗಳೂ ತೊಲಗಿ ಹೋದುವೆಂದು ಭಾವಿಸಿಕೊಳ್ಳಬೇಕು)

## ೩. ಆಸನಶುದ್ಧಿಃ

ಪೃಥ್ವೀತಿ ಮಂತ್ರಸ್ಯ ಮೇರುಪೃಷ್ಠ ಋಷಿಃ (ಶಿರಸಿ)। ಸುತಲಂ ಛಂದಃ (ಮುಖೇ)। ಕೂರ್ಮೋ ದೇವತಾ (ಹೃದಯೇ)। ಆಸನ ಪ್ರಾಣಾಯಾಮೇ ವಿನಿಯೋಗಃ।

ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ।
ತ್ವಂ ಚ ಧಾರಯ ಮಾಂ (ನಿತ್ಯಂ)ದೇವಿ ಪವಿತ್ರಂ ಕುರು ಚಾಸನಮ್॥
ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ ॥

ಇತಿ ಪೃಥಿವೀಂ ಪ್ರಾರ್ಥ್ಯ। ನಿರಸ್ತಃ ಪರಾವಸುಃ (ಇತಿ ತೃಣಂ ನಿರಸ್ಯ)।

(ಬಟ್ಟೆಯಿಂದ ಒಂದು ನೂಲು ಎಳೆ ತೆಗೆದು ಎಸೆದು ಕೈ ತೊಳೆದುಕೊಳ್ಳಬೇಕು ಅಥವಾ ಒಂದು ಉದ್ಧರಣೆ ನೀರನ್ನು ಎಸೆದು ಕೈ ತೊಳೆದುಕೊಳ್ಳಬೇಕು)

ಇದಮಹಮರ್ವಾವಸೋಃ ಸದನ್ನೇ ಸೀದಾಮಿ। ಆಸನೇ ಸೋಮಮಂಡಲೇ ಕೂರ್ಮಸ್ಕಂದೇ ಉಪವಿಷ್ಟೋಽಸ್ಮಿ।* ಓಂ ಭೂರ್ಭುವಸ್ಸುವರೋಮ್ (ಇತ್ಯಾಸನಂ ಸ್ಪೃಷ್ಟ್ವಾ) (ಆಸನವನ್ನು ಮುಟ್ಟಬೇಕು, ಸೂಚನೆ —ಹೆಂಗಸರು ಭೂರ್ಭುವಸ್ಸುವಃ ಎಂದು ಮಾತ್ರ ಹೇಳಬೇಕು)

ಭೂಮಿಂಸ್ಪೃಷ್ಟ್ವಾ (ನೆಲವನ್ನು ನಡುಬೆಟ್ಟಿನಿಂದ ಮುಟ್ಟಿಕೊಂಡು ಕೆಳಗಿನ ಮಂತ್ರಗಳನ್ನು ಪಠಿಸಬೇಕು)

*ಓಂ ಮಂ ಮಂಡೂಕಾಯನಮಃ। ಓಂ ಕೂಂ ಕೂರ್ಮಾಯ ನಮಃ। ಓಂ ವಂ ವರಾಹಾಯ ನಮಃ। ಓಂ ಶೇಂ ಶೇಷಾಯ ನಮಃ। ಓಂ ಕಾಂ ಕಾಲಾಗ್ನಿರುದ್ರಾಯ ನಮಃ। ಓಂ ವಂ ವಜ್ರಾಯ ನಮಃ। ಓಂ ಆಂ ಆಧಾರ ರೂಪಿಣ್ಯೈ ಶಕ್ತ್ಯೈ ನಮಃ। ಓಂ ಪಂ ಪೃಥಿವ್ಯೈ ನಮಃ। ಅಸ್ತ್ರಾಯ ಫಟ್। ನಾರಾಚ ಮುದ್ರಯಾ ದಿಗ್ಬಂಧನಂ ಕುರ್ಯಾತ್॥

(ಮೆತ್ತಗೆ ಚಪ್ಪಾಳೆ ಹೊಡೆದು, ಬಲಗೈ ತರ್ಜನೀ ಬೆಟ್ಟನ್ನು ಸುತ್ತಲೂ ತೋರಿಸಬೇಕು, ಇದಕ್ಕೆ 'ನಾರಾಚ ಮುದ್ರೆ' ಎಂದು ಹೆಸರು)

## ೪. ದಿಗ್ಬಂಧನಮ್

(ಹೊಸದಾಗಿ ಆರಂಭಿಸಿದಾಗ — ಹೊಸದಾಗಿ ಉಪದೇಶವಾದರೆ — ಅಥವಾ ಹೆಚ್ಚು ವೇಳೆ ಇಲ್ಲದಿದ್ದರೆ ಚೌಕನ ಕಂಸಗಳಲ್ಲಿ ಕೊಟ್ಟಭಾಗ ಮಾತ್ರ ಹೇಳಿಕೊಳ್ಳಬಹುದು. ಅಭ್ಯಾಸ ಆದ ಮೇಲೆ ಮುಂದಿನ ಭಾಗವನ್ನು ಮಾಡಬಹುದು.)

---

* ಹೆಂಗಸರು "ಓಂ"ಗೆ ಬದಲಾಗಿ ಉದ್ದಕ್ಕೂ "ಶ್ರೀಂ" ಎಂದು ಹೇಳಿಕೊಳ್ಳಬೇಕು.

[ಐಂದ್ರಾದಿ– ಅಷ್ಟದಿಕ್ಷು ಚಕ್ರದ್ಯಾಯುಧೈರ್ ಬಧ್ನಾಮಿ। ನಮಶ್ಚಕ್ರಾದಿಭ್ಯಃ ಸ್ವಾಹಾ, 'ಓಂ ಯಂ ಓಂ। ಓಂ ರಂ ಓಂ।ಓಂ ವಂ ಓಂ ॥ ']

ಐಂದ್ರ್ಯಾಂ ದಿಶಿ ಚಕ್ರೇಣ ಬಧ್ನಾಮಿ (ಎಂದು ಪೂರ್ವದಿಕ್ಕಿನ ಕಡೆ ತರ್ಜನೀ ಬೆಟ್ಟುತೋರಿಸಬೇಕು) । ಓಂ ಯಂ ಓಂ।ಓಂ ರಂ ಓಂ ।ಓಂ ವಂ ಓಂ॥ (ಹೀಗೆಯೇ ಎಂಟು ದಿಕ್ಕುಗಳಲ್ಲೂ ತರ್ಜನೀ ಬೆಟ್ಟು ತೋರಿಸಿ–ತೋರಿಸಿ ಓಂ ಯಂ ಓಂ ಎಂಬ ಮೂರು ಮಂತ್ರಗಳನ್ನು ಎಂಟು ದಿಕ್ಕುಗಳಲ್ಲೂ ಹೇಳಿಕೊಳ್ಳಬೇಕು.)

೨. ಆಗ್ನೇಯ್ಯಾಂ ದಿಶಿ ಶಂಖೇನ ಬಧ್ನಾಮಿ । ನಮಶ್ಶಂಖಾಯ ಸ್ವಾಹಾ। ...

೩. ಯಾಮ್ಯಾಂ ದಿಶಿ ಗದಯಾ ಬಧ್ನಾಮಿ। ನಮೋ ಗದಾಯೈ ಸ್ವಾಹಾ। ...

೪. ನೈರುತ್ಯಾಂ ದಿಶಿ ಪದ್ಮೇನ ಬಧ್ನಾಮಿ। ನಮಃ ಪದ್ಮಾಯ ಸ್ವಾಹಾ। ...

೫. ವಾರುಣ್ಯಾಂ ದಿಶಿ ಖಡ್ಗೇನ ಬಧ್ನಾಮಿ। ನಮಃ ಖಡ್ಗಾಯ ಸ್ವಾಹಾ। ...

೬. ವಾಯವ್ಯಾಂ ದಿಶಿ ಶಾರ್ಙ್ಗೇಣ ಬಧ್ನಾಮಿ। ನಮಃ ಶಾರ್ಙ್ಗಾಯ ಸ್ವಾಹಾ। ...

೭. ಕೌಬೇರ್ಯಾಂ ದಿಶಿ ತಾರ್ಕ್ಷ್ಯೇಣ ಬಧ್ನಾಮಿ। ನಮಸ್ತಾರ್ಕ್ಷ್ಯಾಯ ಸ್ವಾಹಾ। ...

೮. ಐಶಾನ್ಯಾಂ ದಿಶಿ ವನಮಾಲಯಾ ಬಧ್ನಾಮಿ ।ನಮೋ ವನಮಾಲಾಯೈ ಸ್ವಾಹಾ।...

## ೫. ಕರಶುದ್ಧಿ

**ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತಸಂಧಿಷು।**
**ತತ್ಪೃಷ್ಠ –ಪಾರ್ಶ್ವಯೋಶ್ಚೈವ ಕರಶುದ್ಧಿರುದಾಹೃತಃ ॥**

(ಕೈಗಳ ಈ ಆರು ಭಾಗಗಳಲ್ಲಿ ಓಂ ಯಂ ಓಂ ಎಂಬ ಮೂರು ಬೀಜ ಮಂತ್ರಗಳನ್ನು ಜಪಿಸಬೇಕು — ಇದರಿಂದ ಕೈಗಳು ಶುದ್ಧವಾಗುತ್ತವೆ)

೧. ಮಣಿಬಂಧೇ (ಎಡಗೈ ಮಣಿ ಕಟ್ಟಿನ ಮೇಲೆ –ಕಡಗ ಹಾಕಿಕೊಳ್ಳುವ ಅಥವಾ ಕೈಗಡಿಯಾರ ಕಟ್ಟಿಕೊಳ್ಳುವ ಸ್ಥಳದ ಮೇಲೆ –ಬಲಗೈ ಮಣಿಕಟ್ಟು ಇಟ್ಟುಕೊಂಡು) ಓಂ ಯಂ ಓಂ ಇತ್ಯಾದಿ

೨. ಪ್ರಕೋಷ್ಠೇ( ಎಡಗೈ ಮಣಿಕಟ್ಟಿನ ಮೇಲಿನ ಮತ್ತು ಮೊಣಕ್ಕೈಕೆಳಗಿನ ಮಧ್ಯ ಭಾಗಕ್ಕೆ ಪ್ರಕೋಷ್ಠವೆಂದು ಹೆಸರು) ಇಟ್ಟುಕೊಂಡು ಓಂ ಯಂ ಓಂ ಇತ್ಯಾದಿ

೩. ಕೂರ್ಪರೇ (ಎರಡು ಮೊಣ ಕೈಗಳನ್ನೂ ಜೋಡಿಸಿ ಹಿಡಿದುಕೊಂಡು )ಓಂ ಯಂ ಓಂ

೪. ಹಸ್ತಸಂಧಿಷು (ಎಡಗೈ ಬೆಟ್ಟುಗಳ ಸಂಧಿಗಳಲ್ಲಿ ಬಲಗೈ ಬೆಟ್ಟುಗಳನ್ನು ಇಟ್ಟುಕೊಂಡು) ಓಂ ಯಂ ಓಂ

೫. ತತ್ಪೃಷ್ಠೇಷು (ಎರಡೂ ಅಂಗೈಗಳ ಹಿಂಭಾಗದಲ್ಲಿ ಅದೇ ರೀತಿ ಬೆಟ್ಟುಗಳನ್ನು ಇಟ್ಟುಕೊಂಡು) ಓಂ ಯಂ ಓಂ

೬. ಪಾರ್ಶ್ವಯೋಃ (ಎರಡೂ ಅಂಗೈಗಳನ್ನು ಮೇಲ್ಮುಖವಾಗಿ ಜೋಡಿಸಿ ಕೊಂಡು ತಿಕ್ಕುತ್ತಾ) ಓಂ ಯಂ ಓಂ

## ೬. ಗುರು ನಮಸ್ಕಾರ

೧. ಓಂ ಶ್ರೀ ಗುರುಭ್ಯೋ ನಮಃ। ೨. ಓಂ ಶ್ರೀ ಪರಮಗುರುಭ್ಯೋ ನಮಃ। ೩. ಓಂ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ಗುರುಭ್ಯೋ ನಮಃ । ೪. ಓಂ ಶ್ರೀವೇದವ್ಯಾಸಾಯ ನಮಃ । ೫. ಓಂ ಶ್ರೀ ಭಾರತ್ಯೈ ನಮಃ। ೬. ಓಂ ಶ್ರೀ ಸರಸ್ವತ್ಯೈ ನಮಃ ।೭. ಓಂ ಶ್ರೀ ವಾಯವೇ ನಮಃ । ೮. ಓಂ ಶ್ರೀ ಬ್ರಹ್ಮಣೇ ನಮಃ । ೯. ಓಂ ಶ್ರೀ ಮಹಾಲಕ್ಷ್ಮ್ಯೈ ನಮಃ । ೧೦. ಓಂ. ಶ್ರೀ ನಾರಾಯಣಾಯ ನಮಃ ।೧೧. ಓಂ ಮಂತ್ರದೇವತಾ ಶ್ರೀ ಹರಯೇ ನಮಃ। ೧೨. ಓಂ ಮುಕ್ತಿಪ್ರದಾಯಕ ಶ್ರೀ ವಾಸುದೇವಾಯ ನಮಃ।।

## ೭. ಭಗವಂತನನ್ನು ಹೃದಯದಿಂದ ನೆತ್ತಿಯಲ್ಲಿ ಸ್ಥಾಪಿಸುವುದು

ಓಂ ಯಂ ಓಂ ಇತಿ ವಾಯುಬೀಜಮಂತ್ರೇಣ ಅಧೋಮುಖಂ ಹೃತ್ಕಮಲಂ ಉನ್ಮುಖೀಕೃತ್ಯ। ಓಂ ಓಂ ಓಂ ಇತಿ ಪ್ರಣವ ಮಂತ್ರೇಣ ವಿಕಾಸ್ಯ। ಓಂ ಓಂ ಓಂ ಇತಿ ಪ್ರಣವ ಮಂತ್ರೇಣ ಹೃದಯಸ್ಥಿತಂ ಪರಮಾತ್ಮಾನಂ ಸುಷುಮ್ನಾಮಾರ್ಗೇಣ ಮೂರ್ಧ್ನಿವಿನ್ಯಸೇತ್।।

(ಹೃದಯ ಕಮಲವು ಸಾಮಾನ್ಯವಾಗಿ ಕೆಳಮುಖವಾಗಿ ಬಗ್ಗಿರುತ್ತದೆ. ವಾಯು ಬೀಜ ಮಂತ್ರ ಜಪಿಸಿ ಅದು ಮೇಲ್ಮುಖವಾಗುವಂತೆ ಮಾಡಬೇಕು. ಆಮೇಲೆ ಒಂದಾವರ್ತಿ ಪ್ರಣವಮಂತ್ರ ಪಠಿಸಿದರೆ ಆ ಕಮಲವು ಅರಳುತ್ತದೆ. ಆಗ ಆ ಕಮಲದ ಕರ್ಣಿಕೆಯ ಮೇಲೆ ಕುಳಿತಿರುವ ಪರಮಾತ್ಮನನ್ನು — ಬಿಂಬ ಮೂರುತಿಯನ್ನು — ಇನ್ನೊಮ್ಮೆ ಪ್ರಣವ ಮಂತ್ರ ಜಪಿಸಿ — ಹೃದಯದಿಂದ ಸುಷುಮ್ನಾನಾಡಿಮಾರ್ಗವಾಗಿ ನೆತ್ತಿಗೆ ಕರೆದುಕೊಂಡು ಹೋಗಿ ಅಲ್ಲಿ ಕೂಡಿಸಬೇಕು — ಇದೇ ಮೇಲಿನ ಸಂಸ್ಕೃತ ವಾಕ್ಯಗಳ ಅರ್ಥ)

## ೮. ಪಾಪಪುರುಷ ಧ್ಯಾನಮ್

ಯೋಗಮುದ್ರಯಾ ವಾಮಕುಕ್ಷಿಂ ಸ್ಪೃಷ್ಟ್ವಾ (ಅಂಗುಷ್ಠಮಧ್ಯೇ ತರ್ಜನೀಸ್ಥಾಪನಮ್) (ಬಲಗೈಯಿನ ಹೆಬ್ಬೆಟ್ಟಿನ ಮಧ್ಯದ ರೇಖೆಯಲ್ಲಿ ತರ್ಜನೀ ಬೆಟ್ಟು ಇಟ್ಟುಕೊಳ್ಳುವುದಕ್ಕೆ ಯೋಗ ಮುದ್ರೆ ಎಂದು ಹೆಸರು. ಹಾಗೆ ಇಟ್ಟುಕೊಂಡು ಹೊಟ್ಟೆಯ ಎಡ ಪಾರ್ಶ್ವವನ್ನು ಬಲಗೈಯಿಂದ ಮುಟ್ಟಿಕೊಂಡು ಪಾಪ ಪುರುಷನನ್ನು ನೆನೆಸಬೇಕು — ಹೀಗಿದ್ದಾನೆಂದು ಸ್ಮರಿಸಬೇಕೆಂದು ಅರ್ಥ)

ಬ್ರಹ್ಮಹತ್ಯಾ — ಶಿರಸ್ಕಂ ಚ ಸ್ವರ್ಣಸ್ತೇಯ ಭುಜದ್ವಯಮ್।
ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್ ॥೧॥
ತತ್ಸಂಯೋಗ ಪದದ್ವಂದ್ವಂ ಅಂಗ ಪ್ರತ್ಯಂಗ –ಪಾತಕಮ್।
ಉಪಪಾತಕರೋಮಾಣಂ ರಕ್ತಶ್ಮಶ್ರು–ವಿಲೋಚನಮ್ ॥೨॥
ಆಚೀತನಮಧೋವಕ್ತ್ರಂ ದಗ್ಧಪಾತಕಸನ್ನಿಭಮ್।
ಖಡ್ಗ–ಚರ್ಮ–ಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್॥೩॥

### ೯. ಪಾಪಪುರುಷಶೋಷಣಮ್

ಇತಿ ಪಾಪಪುರುಷಂ ಧ್ಯಾತ್ವಾ ತಂ ಪೀಠಮುದ್ರಯಾ ನಾಭಿದೇಶಮಾನೀಯ। ನಾಭಿಂ ಸ್ಪೃಷ್ಟ್ವಾ। ಪಾಪಪುರುಷ ಈ ರೀತಿ ಇದ್ದಾನೆಂದು ಚಿಂತಿಸಿ ಅವನನ್ನು ಪೀಠ ಮುದ್ರೆಯಿಂದ ಹೊಕ್ಕಳಿನ ಪ್ರದೇಶಕ್ಕೆ ಎಳೆದು ತಂದು –ಕೈಯನ್ನು ಎಡ ಹೊಟ್ಟೆಯಿಂದ ಹೊಕ್ಕಳಿನ ಬಳಿಗೆ ಎಳೆದುಕೊಂಡು ಬಂದು, ಹೊಕ್ಕಳನ್ನು ಮುಟ್ಟಿಕೊಂಡು, ಈ ಕೆಳಗಿನ ಭಾಗವನ್ನು ಪಠಿಸಬೇಕು. ಪೀಠಮುದ್ರೆ ಎಂದರೆ 'ಚತುರಂಗುಲಿ ಮೂಲೇ ಅಂಗುಷ್ಠನಿವೇಶನಮ್' ತರ್ಜನ್ಯಾದಿ ನಾಲ್ಕು ಬೆಟ್ಟುಗಳ ಕೆಳಗೆ (ಬುಡದಲ್ಲಿ)ಹೆಬ್ಬೆಟ್ಟು ಇಟ್ಟು ಕೊಳ್ಳುವುದು.

ಎಡ ಪಾರ್ಶ್ವದಲ್ಲಿ ಬಲಗೈಯನ್ನು ಪೀಠಮುದ್ರೆಯಂತೆ —ಮೇಲಿನಂತೆ —ಜೋಡಿಸಿ ಆ ಕೈಯನ್ನು ನಾಭಿಯ ಹತ್ತಿರ ಎಳೆದುಕೊಂಡು ಬರಬೇಕು, ಕೈಯ ಜೊತೆ ಪಾಪಪುರುಷನೂ ನಾಭಿದೇಶಕ್ಕೆ ಬಂದಿದ್ದಾನೆಂದು ಭಾವಿಸಿ ಕೆಳಗಿನ ಮಂತ್ರ 'ವಾಯುನಾಶೋಷಯತು'ವರೆಗೆ ಪಠಿಸಿ, ಆಮೇಲೆ ಬಲಮೂಗಿನ ಹೊಳ್ಳೆಯಿಂದ ಉಸಿರನ್ನು ಎಳೆದುಕೊಂಡು ಉಸಿರು ಬಿಗಿಹಿಡಿದು, 'ಓಂ ಯಂ ಓಂ' ಎಂಬ ವಾಯುಬೀಜಮಂತ್ರವನ್ನು ಆರಾವರ್ತಿ ಜಪಿಸಬೇಕು. ಆದರಿಂದ ಪಾಪಪುರುಷ ಕಟ್ಟಿಗೆಯಂತೆ ಒಣಗಿ ಹೋಗುತ್ತಾನೆಂದು ಭಾವಿಸಿಕೊಳ್ಳಬೇಕು.

ಷಟ್ಕೋಣಮಂಡಲ ಮಧ್ಯಸ್ಥೋ ನೀಲವರ್ಣೋ ವಾಯು- ಬೀಜವಾಚ್ಯೋ ವಾಯ್ವಂತರ್ಯಾಮಿ ಮ.ಭಾ.ಮು. ಶಂಖ–ಚಕ್ರ–ಶಾರ್ಙ್ಗಬಾಣವಾನ್ ಶ್ರೀ ಕೃತಿಪತಿ ಶ್ರೀಪ್ರದ್ಯುಮ್ನೋ ಭಗವಾನ್ ಮಚ್ಚರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು। ದಕ್ಷಿಣ ನಾಸಾ ಪುಟೇನ ವಾಯುಮಾಪೂರ್ಯ। ಶ್ವಾಸಂ ನಿರುಧ್ಯ। ಓಂ ಯಂ ಓಂ ಇತಿ ಷಡ್ವಾರಂ ಜಪೇತ್ । ತಂ ಶುಷ್ಕಂ ಭಾವಯೇತ್॥

೯. ಪಾಪಪುರುಷ ದಾಹನಮ್ ತಂ ಯೋನಿ ಮುದ್ರಯಾ ಹೃದಯದೇಶ ಮಾನೀಯ। ಹೃದಯಂ ಸ್ಪೃಷ್ಟ್ವಾ। ತ್ರಿಕೋಣ ಮಂಡಲ ಮಧ್ಯಸ್ಥೋ ರಕ್ತವರ್ಣೋ

---

*ಮ. ಭಾ. ಮು. ಎಂಬುದು ಮನುನಾಮಕ –ಭಾರತೀರಮಣ–ಮುಖ್ಯ ಪ್ರಾಣಾಂತರ್ಗತ – ಎಂಬುದಕ್ಕೆ ಸಂಕೇತ.

ಅಗ್ನಿ ಬೀಜ ವಾಚ್ಯೋ (ಅ) ಗ್ನ್ಯಂತರ್ಗತಃ ಚಕ್ರ–ಶಂಖ–ಮುಸಲಾ–ಹಲಾವಾನ್ ಮ. ಭಾ. ಮು. ಜಯಾಪತಿ ಶ್ರೀಸಂಕರ್ಷಣೋ ಭಗವಾನ್ ಮಚ್ಛರೀರಸ್ಥಂ ಪಾಪ|-ಪುರುಷಂ ಅಗ್ನಿನಾ ನಿರ್ದಹತು|

ಓಂ ರಂ ಓಂ (ಇತಿ ದ್ವಾದಶವಾರಂ ಜಪೇತ್)| ತಂ ದಗ್ಧಂ ಭಾವಯಿತ್ವಾ, ತದ್ಭಸ್ಮ ವಾಮನಾಸಾಪುಟೇನ ಬಹಿಃ ನಿಸ್ಸಾರಯೇತ್| ಅಪ ಉಪಸ್ಪೃಶ್ಯ||

[ಹಾಗೆ ಒಣಗಿದ ಕಟ್ಟಿಗೆಯಂತಾದ ಪಾಪಪುರುಷನನ್ನು ಯೋನಿ ಮುದ್ರೆಯಿಂದ (ಎಂದರೆ ಕನಿಷ್ಠಿಕಾಂಗುಷ್ಠನಿವೇಶನಮ್ – ಕಿರಿಬೆಟ್ಟನ್ನೂ ಹೆಬ್ಬೆಟ್ಟನ್ನು ಜೋಡಿಸಿ ಹಿಡಿದು ಕೊಳ್ಳುವುದು) ಹೃದಯ ಪ್ರದೇಶಕ್ಕೆ ಎಳೆದು ತಂದು ಅಲ್ಲಿರುವ ತ್ರಿಕೋಣ ಮಂಡಲದಲ್ಲಿ ಕೂಡಿಸಿ ಅದರಲ್ಲಿರುವ ಸಂಕರ್ಷಣ ಮೂರ್ತಿಯನ್ನು ಈ ಪಾಪಪುರುಷನನ್ನು ಸುಟ್ಟು ಹಾಕುವಂತೆ ಪ್ರಾರ್ಥಿಸಿ ಹನ್ನೆರಡಾವರ್ತಿ ಅಗ್ನಿಬೀಜ ಮಂತ್ರವನ್ನು ಜಪಿಸಬೇಕು. ಅದರಿಂದ ಪಾಪ-ಪುರುಷನು ಸುಟ್ಟು ಬೂದಿಯಾದನೆಂದು ಭಾವಿಸಿಕೊಳ್ಳಬೇಕು. ಅನಂತರ ಎಡ ಮೂಗಿನ ಹೊಳ್ಳೆಯಿಂದ ಉಸಿರನ್ನು ಹೊರಗೆ ಬಿಟ್ಟು ಆ ಪಾಪಪುರುಷ ಸುಟ್ಟು ಹೋದ ಬೂದಿಯನ್ನು ಹೊರಗೆ ಹಾಕಿದೆವೆಂದು ಭಾವಿಸಿ ಕೈಯನ್ನು ಸ್ವಲ್ಪ ನೀರು ಹಾಕಿಕೊಂಡು ತೊಳೆದು ಕೊಳ್ಳಬೇಕು]

## ೧೦. ದೇಹ ಪ್ಲಾವನಮ್

ದಾನಮುದ್ರಯಾ ಶಿರಃ ಸ್ಪೃಷ್ಟ್ವಾ| ಶ್ವೇತವರ್ಣೋ ವರ್ತುಲಮಂಡಲ ಮಧ್ಯಸ್ಥೋ ವರುಣಬೀಜವಾಚ್ಯೋ ವರುಣಾಂತರ್ಯಾಮೀ ಚಕ್ರ–ಶಂಖ–ಗದಾಬ್ಜಾಯುಧೋ ಮ. ಭಾ. ಮು. ಮಾಯಾಪತಿ ಶ್ರೀ ವಾಸುದೇವೋ ಭಗವಾನ್ ಮಚ್ಛರೀರೇ ಅಮೃತವೃಷ್ಟ್ಯಾ ವರುಣೇನ ಅಪ್ಲಾವಯತು | ಓಂ ವಂ ಓಂ ಇತಿ ಚತುರ್ವಿಂಶತಿವಾರಂ ಜಪೇತ್| ಅಮೃತವೃಷ್ಟ್ಯಾ ಆತ್ಮಾನಂ ಶುದ್ಧಂ ಭಾವಯೇತ್||

ದಾನಮುದ್ರೆ ಎಂದರೆ 'ಪಂಚಾಂಗುಲಿ ನಿವೇಶನಮ್' – ಐದೂ ಬೆಟ್ಟುಗಳನ್ನು ಜೋಡಿಸಿ ತಲೆಯ ಮೇಲಿಟ್ಟುಕೊಂಡು ವಾಸುದೇವನನ್ನು ಪ್ರಾರ್ಥಿಸಿ ವರುಣಬೀಜ ಮಂತ್ರವನ್ನು ಇಪ್ಪತ್ತನಾಲ್ಕು ಆವರ್ತಿ ಜಪಿಸಬೇಕು. ಅದರಿಂದ ಅಮೃತ ವೃಷ್ಟಿ ಆಯಿತೆಂದೂ, ನಮ್ಮ ದೇಹವು ಪರಿಶುದ್ಧವಾಯಿತೆಂದೂ ಭಾವಿಸಿಕೊಳ್ಳಬೇಕು.

## ೧೧. ಭಗವಂತನನ್ನು ಪುನಃ ಹೃದಯದಲ್ಲಿ ಸ್ಥಾಪಿಸುವುದು

ಓಂ ಓಂ ಓಂ ಇತಿ ಪ್ರಣವ ಮಂತ್ರಂ ಜಪನ್ ಮೂರ್ಧ್ನಿ ಸ್ಥಿತಂ ಪರಮಾತ್ಮಾನಂ ಪುನಃ ಸುಷುಮ್ನಾಮಾರ್ಗೇಣ ಹೃದಯೇ ಸ್ಥಾಪಯೇತ್|

(ನೆತ್ತಿಯಲ್ಲಿರುವ ಪರಮಾತ್ಮನನ್ನು ಪ್ರಣವ ಮಂತ್ರ ಜಪಿಸಿ ಪುನಃ ಸುಷುಮ್ನಾ ಮಾರ್ಗವಾಗಿ ಹೃದಯದಲ್ಲಿ ಸ್ಥಾಪನೆ ಮಾಡಬೇಕು)

## ೧೨. ಪುಣ್ಯಪುರುಷ ಧ್ಯಾನಮ್

ಜ್ಞಾನಮುದ್ರಯಾ (ತರ್ಜನ್ಯಂಗುಷ್ಠನಿವೇಶನಮ್) ದಕ್ಷಿಣ ಕುಕ್ಷಿಂ ಸ್ಪೃಷ್ಟ್ವಾ ಪುಣ್ಯಪುರುಷಂ ಧ್ಯಾಯೇತ್ । (ಜ್ಞಾನಮುದ್ರೆಯಿಂದ –ಹೆಬ್ಬೆಟ್ಟನ್ನೂ ತರ್ಜನೀ ಬೆಟ್ಟನ್ನೂ ಜೋಡಿಸಿ ಬಲಭಾಗದ ಹೊಟ್ಟೆ ಮುಟ್ಟಿಕೊಂಡು ಪುಣ್ಯಪುರುಷನನ್ನು ಧ್ಯಾನಮಾಡಬೇಕು)

ಹರಿಃ ಓಂ । ಅಶ್ವ ಮೇಧ ಶಿರಸ್ಕಂ ಚ ಮಹಾದಾನ – ಭುಜದ್ವಯಮ್।
ಸೋಮ ಪಾನಹೃದಾ ಯುಕ್ತಂ ಬ್ರಹ್ಮಚರ್ಯ ಕಟಿದ್ವಯಮ್॥೧॥
ತತ್ಸಂಯೋಗ ಪದದ್ವಂದ್ವಂ ಅಂಗೋಪಾಂಗಶುಭಕ್ರಿಯಮ್
ಸರ್ವವ್ರತಾಂಗ ರೋಮಾಣಂ ದಯಾದಾಕ್ಷಿಣ್ಯ– ಲೋಚನಮ್॥೨॥
ಸಾರ್ಧ ತ್ರಿಕೋಟಿತೀರ್ಥಾಂಗಂ ಸರ್ವದೇವಮಯಂ ಪ್ರಭುಮ್
(ನಿಭಮ್)।
ಶಂಖ ಚಕ್ರಗದಾ ಪದ್ಮ –ಧರಂ ಶುಭ್ರಮಜಂ ವಿಭುಮ್ ॥೩॥
ಸಿಂಹಾಸನೇ ಸಮಾಸೀನಂ ದೇವ ದೇವ ನಮಸ್ಕೃತಮ್।
ಸರ್ವವೇದೈಃ ಪ್ರಕೀರ್ತ್ಯಂ ತಂ ಕುಕ್ಷೌ ಧರ್ಮಂ ವಿಚಿಂತಯೇತ್॥೪॥

। ಇತಿ ಶ್ರೀ ಗುರುಮಂತ್ರ ಜಪಃ ಸಮಾಪ್ತಃ ।
॥ ಶ್ರೀ ಕೃಷ್ಣಾರ್ಪಣಮಸ್ತು॥

# ೨. ತತ್ತ್ವನ್ಯಾಸಕ್ರಮಃ ॥

## ಶ್ರೀ ಗುರುಭ್ಯೋ ನಮಃ

ಗುರುನಮಸ್ಕಾರಃ । 1. ಓಂ ಶ್ರೀ ಗುರುಭ್ಯೋ ನಮಃ । 2. ಶ್ರೀ ಪರಮ ಗುರುಭ್ಯೋ ನಮಃ । 3. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋ ನಮಃ । 4. ಶ್ರೀ ವೇದವ್ಯಾಸಾಯ ನಮಃ । 5. ಶ್ರೀ ಭಾರತ್ಯೈ ನಮಃ । 6. ಶ್ರೀ ಸರಸ್ವತ್ಯೈ ನಮಃ । 7. ಶ್ರೀ ವಾಯವೇ ನಮಃ । 8. ಶ್ರೀ ಬ್ರಹ್ಮಣೇ ನಮಃ । 9.ಶ್ರೀ ಮಹಾಲಕ್ಷ್ಮ್ಯೈ ನಮಃ । 10. ಶ್ರೀ ನಾರಾಯಣಾಯ ನಮಃ । 11. ಮಂತ್ರದೇವತಾ ಶ್ರೀ ತತ್ತ್ವಾಂತರ್ಯಾಮಿ ಶಕ್ತ್ಯಾದಿ ರೂಪಿ ಶ್ರೀ ಲಕ್ಷ್ಮೀ ನಾರಾಯಣಾಯ ನಮಃ । 12.ಮುಕ್ತಿ ಪ್ರದಾಯಕ ಶ್ರೀ ವಾಸುದೇವಾಯ ನಮಃ॥

ಪ್ರಾಣಾಯಾಮಃ। ಮೂಲ ಮಂತ್ರದಿಂದ (ಓಂ ಓಂ ನಮೋ ನಾರಾಯಣಾಯ ಓಂ)

ದೇವತಾಧ್ಯಾನಮ್

ವಾಸುದೇವಾದಿಕಾಃ ಶುಕ್ಲ–ರಕ್ತ ಪೀತಾಸಿತೋಜ್ವಲಾಃ।
ಚಕ್ರಶಂಖ ಗದಾಬ್ಜೇತಃ ಪ್ರಥಮೋ ಮುಸಲೀಹಲೀ॥
ಸ ಚಕ್ರ ಶಂಖಿಸ್ತ್ವಪರಸ್ ತೃತೀಯಃ ಶಾರ್ಙ್ಗಬಾಣವಾನ್ ।
ಸಶಂಕ ಚಕ್ರ ಸ್ತುರ್ಯಸ್ತುಚಕ್ರ ಶಂಖಾಸಿ ಚರ್ಮವಾನ್॥

ಕರನ್ಯಾಸಃ (ಪಂಚಾಂಗ ನ್ಯಾಸಃ)

ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ ಅಂಗುಷ್ಠಾಭ್ಯಾಂ ನಮಃ
ಓಂ ಭುವಃ ವಾಯ್ವಾತ್ಮನೇ ಶ್ರೀ ಪ್ರದ್ಯುಮ್ನಾಯ ತರ್ಜನೀಭ್ಯಾಂ ನಮಃ
ಓಂ ಸ್ವಃ ಸೂರ್ಯಾತ್ಮನೇ ಶ್ರೀಸಂಕರ್ಷಣಾಯ ಮಧ್ಯಮಾಭ್ಯಾಂ ನಮಃ
ಓಂ ಭೂರ್ಭುವಸ್ಸುವಃ ಶ್ರೀ ವಾಸುದೇವಾಯ ಅನಾಮಿಕಾಭ್ಯಾಂ ನಮಃ
ಓಂ ಸತ್ಯಂ ನಾರಾಯಣಾಯ ಕನಿಷ್ಠಿಕಾಭ್ಯಾಂ ನಮಃ

**ಅಂಗನ್ಯಾಸಃ**

ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ ಹೃದಯಾಯ ನಮಃ
ಓಂ ಭುವಃ ವಾಯ್ವಾತ್ಮನೇ ಶ್ರೀಪ್ರದ್ಯುಮ್ನಾಯ ಶಿರಸೇ ಸ್ವಾಹಾ
ಓಂ ಸುವಃ ಸೂರ್ಯಾತ್ಮನೇ ಶ್ರೀಸಂಕರ್ಷಣಾಯ ಶಿಖಾಯೈ ವಷಟ್

ಓಂ ಭೂರ್ಭುವಸ್ಸುವಃ ಪ್ರಜಾಪತ್ಯಾತ್ಮನೇ ಶ್ರೀವಾಸುದೇವಾಯ ಕವಚಾಯ ಹುಮ್

ಓಂ ಸತ್ಯಂ ನಾರಾಯಣಾಯ ಅಸ್ತ್ರಾಯ ಫಟ್

ಓಂ ಭೂರ್ಭುವಃಸುವರೋಂ (ಪ್ರಾರಂಭದಲ್ಲಿ) ಇತಿ ದಿಗ್ಬಂಧಃ| (ಮುಗಿಸುವಾಗ) ಇತಿ ದಿಙ್ಮುಖಿಃ|

**ಋಷ್ಯಾದಿನ್ಯಾಸಃ**

ಏತೇಷಾಂ ತತ್ವಮಂತ್ರಾಣಾಂ ಅಂತರ್ಯಾಮೀ ಋಷಿಃ (ಶಿರಸಿ)| ಗಾಯತ್ರೀ ಛಂದಃ (ಮುಖೇ)| ಮನುನಾಮಕಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀತತ್ವಾಂತರ್ಯಾಮೀ ಶಕ್ತ್ಯಾದಿರೂಪೀ ಶ್ರೀಲಕ್ಷ್ಮೀನಾರಾಯಣೋ ದೇವತಾ (ಹೃದಯೇ) | ನ್ಯಾಸೇ ವಿನಿಯೋಗಃ | (ಮುಗಿಸುವಾಗ-ನ್ಯಾಸೋಪಸಂಹಾರೇ ವಿನಿಯೋಗಃ||)

**ಧ್ಯಾನಮ್**

ಪ್ರಧಾನೋಪಮವರ್ಣಾನಿ ದ್ವಿಭುಜಾನ್ಯಶೇಷತಃ|
ಕೃತಾಂಜಲಿ ಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ||

(ಪ್ರಾರಂಭಿಸುವಾಗ) ಮ. ಭಾ. ಮು. ಶ್ರೀತತ್ವಾಂತರ್ಯಾಮಿ ಶಕ್ತ್ಯಾದಿರೂಪಿ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಮ.ಭಾ.ಮು. ಶ್ರೀತತ್ವಾಂತರ್ಯಾಮಿ ಶ್ರೀಶಕ್ತ್ಯಾದಿರೂಪಿ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ತತ್ತ್ವನ್ಯಾಸಂ ಕರಿಷ್ಯೇ

**ನ್ಯಾಸಕ್ರಮ**

(ಕೆಳಗಿನ 12 ಮಂತ್ರಗಳನ್ನು ಹೇಳಿಕೊಳ್ಳುತ್ತಾ ಬಲಗೈ ನಡುಬೆಟ್ಟಿನಿಂದ ಹೃದಯದ ಸುತ್ತಲೂ ಪ್ರದಕ್ಷಿಣಾಕಾರವಾಗಿ ನ್ಯಾಸಮಾಡಿಕೊಳ್ಳಬೇಕು).

| | | | | |
|---|---|---|---|---|
| ೧. | ಓಂ | ಪರಾಯ | ಶಕ್ತ್ಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂನಮಃ |
| ೨. | ಓಂ | ಪರಾಯ | ಪ್ರತಿಷ್ಠಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೩. | ಓಂ | ಪರಾಯ | ಸಂವಿದಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೪. | ಓಂ | ಪರಾಯ | ಸ್ಫೂರ್ತ್ಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೫. | ಓಂ | ಪರಾಯ | ಪ್ರವೃತ್ತ್ಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೬. | ಓಂ | ಪರಾಯ | ಕಲಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೭. | ಓಂ | ಪರಾಯ | ವಿದ್ಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೮. | ಓಂ | ಪರಾಯ | ಮತ್ಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೯. | ಓಂ | ಪರಾಯ | ನಿಯತ್ಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೧೦. | ಓಂ | ಪರಾಯ | ಮಾಯಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೧೧. | ಓಂ | ಪರಾಯ | ಕಾಲಾತ್ಮನೇ | ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ |
| ೧೨. | ಓಂ | ಪರಾಯ | ಪುರುಷಾತ್ಮನೇ | ಬ್ರಹ್ಮವಾಯುಭ್ಯಾಂ ನಮಃ |

೧೩. ಓಂ ಪರಾಯ ಅವ್ಯಕ್ತಾತ್ಮನೇ ಬ್ರಹ್ಮಾಣಿ—ಭಾರತೀಭ್ಯಾಂ ನಮಃ (ಬಲ ಹೆಗಲ ಮೇಲೆ)

೧೪. ಓಂ ಪರಾಯ ಮಹದಾತ್ಮನೇ ಬ್ರಹ್ಮವಾಯುಭ್ಯಾಂ ನಮಃ (ಎಡ ಹೆಗಲ ಮೇಲೆ)

೧೫. ಓಂ ಪರಾಯ ಅಹಂಕಾರಾತ್ಮನೇ ಗರುಡಶೇಷ ರುದ್ರೇಭ್ಯೋ ನಮಃ (ಬಲ ತೊಡೆಯ ಮೇಲೆ)

೧೬. ಓಂ ಪರಾಯ ಮನ ಆತ್ಮನೇ ಸ್ಕಂದೇಂದ್ರಾಭ್ಯಾಂ ನಮಃ (ಎಡ ತೊಡೆಯ ಮೇಲೆ)

(೧೭ ರಿಂದ ೨೧ ಮಂತ್ರಗಳನ್ನು ಹೇಳಿಕೊಂಡು ಎಡಗೈತರ್ಜನೀ ಬೆಟ್ಟಿನಿಂದ ಬಲಗೈಯಿನ ಅಂಗುಷ್ಠಾದಿ ಐದುಬೆರಳುಗಳಲ್ಲೂ ನ್ಯಾಸ ಮಾಡಿಕೊಳ್ಳಬೇಕು.)

೧೭. ಓಂ ಪರಾಯ ಶ್ರೋತ್ರಾತ್ಮನೇ ದಿಗ್ದೇವತಾಭ್ಯೋ ನಮಃ

೧೮. ಓಂ ಪರಾಯ ತ್ವಗಾತ್ಮನೇ ಪ್ರಾಣಾಯ ನಮಃ

೧೯. ಓಂ ಪರಾಯ ಚಕ್ಷುರಾತ್ಮನೇ ಸೂರ್ಯಾಯ ನಮಃ

೨೦. ಓಂ ಪರಾಯ ಜಿಹ್ವಾತ್ಮನೇ ವರುಣಾಯ ನಮಃ

೨೧. ಓಂ ಪರಾಯ ಘ್ರಾಣಾತ್ಮನೇ ಅಶ್ವಿಭ್ಯಾಂ ನಮಃ

(೨೨ ರಿಂದ ೨೬ ರವರೆಗೆ ಬಲಗೈ ತರ್ಜನೀ ಬೆಟ್ಟಿನಿಂದ ಎಡಗೈಯಿನ|ಬ್ರಹ್ಮಚಾರಿಗಳು (ಸೃಷ್ಟಿಕ್ರಮ) ಕಿರಿಬೆಟ್ಟಿನಿಂದ ಹೆಬ್ಬೆಟ್ಟಿನವರೆಗೂ, ಗೃಹಸ್ಥರು (ಸ್ಥಿತಿಕ್ರಮ) ಹೆಬ್ಬೆಟ್ಟಿನಿಂದ ಕಿರಿಬೆಟ್ಟಿನವರೆಗೂ ನ್ಯಾಸ ಮಾಡಿಕೊಳ್ಳ ಬೇಕು)

೨೨. ಓಂ ಪರಾಯ ವಾಗಾತ್ಮನೇ ವಹ್ನಯೇ ನಮಃ

೨೩. ಓಂ ಪರಾಯ ಪಾಣ್ಯಾತ್ಮನೇ ದಕ್ಷಾಯ ನಮಃ

೨೪. ಓಂ ಪರಾಯ ಪಾದಾತ್ಮನೇ ಜಯಂತಾಯ ನಮಃ

೨೫. ಓಂ ಪರಾಯ ಪಾಯ್ವಾತ್ಮನೇ ಮಿತ್ರಾಯ ನಮಃ

೨೬. ಓಂ ಪರಾಯ ಉಪಸ್ಥಾತ್ಮನೇ ಮನವೇ ನಮಃ

(೨೭ ರಿಂದ ೩೧ ರವರೆಗೆ ಬಲಗೈ ತರ್ಜನೀ ಬೆಟ್ಟಿನಿಂದ ಬಲಗಾಲಿನ ಕಿರಿಬೆರಳಿಂದ ಹೆಬ್ಬೆಟ್ಟಿನವರೆಗೆ ನ್ಯಾಸಮಾಡಿಕೊಳ್ಳಬೇಕು)

೨೭. ಓಂ ಪರಾಯ ಶಬ್ದಾತ್ಮನೇ ಬೃಹಸ್ಪತಿಪ್ರಾಣಾಭ್ಯಾಂ ನಮಃ

೨೮. ಓಂ ಪರಾಯ ಸ್ಪರ್ಶಾತ್ಮನೇ ಅಪಾನಾಯ ನಮಃ

೨೯. ಓಂ ಪರಾಯ ರೂಪಾತ್ಮನೇ ವ್ಯಾನಾಯ ನಮಃ

೩೦. ಓಂ ಪರಾಯ ರಸ ಆತ್ಮನೇ ಉದಾನಾಯ ನಮಃ

೩೧. ಓಂ ಪರಾಯ ಗಂಧಾತ್ಮನೇ ಸಮಾನಾಯ ನಮಃ

(೩೨ ರಿಂದ ೩೬ ರವರೆಗೆ ಅದೇ ಬೆಟ್ಟಿನಿಂದ ಬ್ರಹ್ಮಚಾರಿಗಳು (ಸೃಷ್ಟಿಕ್ರಮ) ಎಡಗಾಲಿನ ಹೆಬ್ಬೆಟ್ಟಿನಿಂದ ಕಿರಿಬೆರಳಿನವರೆಗೂ ಗೃಹಸ್ಥರು (ಸ್ಥಿತಿಕ್ರಮ) ಕಿರಿಬೆರಳಿಂದ ಹೆಬ್ಬೆಟ್ಟಿನವರೆಗೂ. ನ್ಯಾಸಮಾಡಿಕೊಳ್ಳಬೇಕು.)

೩೨. ಓಂ ಪರಾಯ ಆಕಾಶಾತ್ಮನೇ ಮಹಾಗಣಪತಯೇ ನಮಃ

೩೩. ಓಂ ಪರಾಯ ವಾಯ್ವಾತ್ಮನೇ ವಾಯವೇ ನಮಃ

೩೪. ಓಂ ಪರಾಯ ತೇಜ ಆತ್ಮನೇ ವಹ್ನಯೇ ನಮಃ

೩೫. ಓಂ ಪರಾಯ ಅಬಾತ್ಮನೇ ವರುಣಾಯ ನಮಃ

೩೬. ಓಂ ಪರಾಯ ಪೃಥಿವ್ಯಾತ್ಮನೇ ಶನ್ಯೈಶ್ಚರಧರಾಭ್ಯಾಂ ನಮಃ

[ಸೂಚನೆ—ಇಲ್ಲಿಗೆ ತತ್ವನ್ಯಾಸ ಮುಗಿಯಿತು. ಅನಂತರ ಮಾತೃಕಾನ್ಯಾಸ ಮಾಡಿಕೊಂಡು, ಹೇಳಿಸಿಕೊಂಡ ಹಂಸಮಂತ್ರಾದಿ ಅಥವಾ ಕೃಷ್ಣಮಂತ್ರಾದಿಗಳ ಜಪಗಳನ್ನು ಜಪಿಸಬೇಕು. ಅವೆಲ್ಲ ಮುಗಿದಮೇಲೆ ಮೊದಲು ಮಾತೃಕಾನ್ಯಾಸ ಮಾಡಿಕೊಂಡು ಕೊನೆಗೆ ತತ್ವನ್ಯಾಸಮಾಡಬೇಕು. ಮುಗಿಸುವಾಗ ಮಾತ್ರ ತತ್ವನ್ಯಾಸಕ್ಕಾಗಲಿ ಮಾತೃಕಾನ್ಯಾಸಕ್ಕಾಗಲಿ ಗುರುನಮಸ್ಕಾರ ಮಾತ್ರ ಹೇಳಬೇಕಾಗಿಲ್ಲ. ಪ್ರಾಣಾಯಾಮಗಳೆಲ್ಲವೂ ಅದೇ ಕ್ರಮದಲ್ಲೇ ಮಾಡಬೇಕು].

(ತತ್ವನ್ಯಾಸ ಮುಗಿಸುವಾಗ) ಹೀಗೆ ಸಂಕಲ್ಪ ಮಾಡಬೇಕು—ಮ. ಭಾ. ಮು. ಶ್ರೀ ತತ್ವಾಂತರ್ಯಾಮಿ ಶಕ್ತ್ಯಾದಿರೂಪಿ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಮ.ಭಾ.ಮು. ತತ್ವಾಂತರ್ಯಾಮಿ ಶಕ್ತ್ಯಾದಿರೂಪಿ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ತತ್ವನ್ಯಾಸೋಪಸಂಹಾರಂ ಕರಿಷ್ಯೇ—ಎಂದು ಸಂಕಲ್ಪಮಾಡಿ ಅದೇ ಕ್ರಮದಲ್ಲೇ (೧ ರಿಂದ ೩೬) ಮಾಡಬೇಕು, ತತ್ವನ್ಯಾಸ ಮಾಡಿದ ನಂತರ ''ಯಸ್ಯ ಸ್ಮೃತ್ಯಾಚ—'' ಹೇಳಿ ಜಪವನ್ನು ಸಮಾಪನೆ ಮಾಡಬೇಕು. [ಅನೇನ ಯಥಾಶಕ್ತಿ ಹಂಸಮಂತ್ರ—ಆದಿ ಮಂತ್ರ ಜಪೇನ ಮ. ಭಾ. ಮು. ಶ್ರೀ ಲಕ್ಷ್ಮೀನಾರಾಯಣ ಪ್ರೀಯತಾಂ| ಸುಪ್ರೀತೋವರದೋ ಭವತು| ಶ್ರೀಕೃಷ್ಣಾರ್ಪಣಮಸ್ತು] ಎಂದು ಹೇಳಿ ನೀರು ಬಿಟ್ಟುಬಿಡಬೇಕು.

# ೩. ಮಾತೃಕಾನ್ಯಾಸಃ

೧. ಗುರುನಮಸ್ಕಾರಃ। ೧. ಶ್ರೀ ಗುರುಭ್ಯೋನಮಃ ಇತ್ಯಾದಿ 10. ಶ್ರೀ ನಾರಾಯಣಾಯ ನಮಃ (ತತ್ತ್ವ ನ್ಯಾಸ ಮಂತ್ರದಲ್ಲಿ ನೋಡಿ) 11. ಮಂತ್ರದೇವತಾ ಮ.ಭಾ.ಮು. ಅಜಾದಿರೂಪಿ ಶ್ರೀಲಕ್ಷ್ಮೀನಾರಾಯಣಾಯ ನಮಃ। 12.ಮುಕ್ತಿ ಪ್ರದಾಯಕ ಶ್ರೀ ವಾಸುದೇವಾಯ ನಮಃ॥

೨. ಪ್ರಾಣಾಯಾಮಃ । ಮೂಲಮಂತ್ರದಿಂದ

೩. ಕರನ್ಯಾಸಃ

ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ ಅಂಗುಷ್ಠಾಭ್ಯಾಂ ನಮಃ
ಓಂ ಭುವಃ ವಾಯ್ವಾತ್ಮನೇ ಶ್ರೀ ಪ್ರದ್ಯುಮ್ನಾಯ ತರ್ಜನೀಭ್ಯಾಂ ನಮಃ
ಓಂ ಸ್ವಃ ಸೂರ್ಯಾತ್ಮನೇ ಶ್ರೀ ಸಂಕರ್ಷಣಾಯ ಮಧ್ಯಮಾಭ್ಯಾಂ ನಮಃ
ಓಂ ಭೂರ್ಭುವಸ್ಸುವಃ ಶ್ರೀ ವಾಸುದೇವಾಯ ಅನಾಮಿಕಾಭ್ಯಾಂ ನಮಃ
ಓಂ ಸತ್ಯಂ ನಾರಾಯಣಾಯ ಕನಿಷ್ಠಿಕಾಭ್ಯಾಂ ನಮಃ

೪. ಅಂಗನ್ಯಾಸಃ

ಓಂ ಭೂಃ ಅಗ್ನ್ಯಾತ್ಮನೇ ಶ್ರೀ ಅನಿರುದ್ಧಾಯ ಹೃದಯಾಯ ನಮಃ
ಓಂ ಭುವಃ ವಾಯ್ವಾತ್ಮನೇ ಶ್ರೀ ಪ್ರದ್ಯುಮ್ನಾಯ ಶಿರಸೇ ಸ್ವಾಹಾ
ಓಂ ಸ್ವಃ ಸೂರ್ಯಾತ್ಮನೇ ಶ್ರೀ ಸಂಕರ್ಷಣಾಯ ಶಿಖಾಯೈ ವಷಟ್
ಓಂ ಭೂರ್ಭುವಸ್ಸುವಃ ಪ್ರಜಾಪತ್ಯಾತ್ಮನೇ ಶ್ರೀ ವಾಸುದೇವಾಯ ಕವಚಾಯ ಹುಮ್
ಓಂ ಸತ್ಯಂ ನಾರಾಯಣಾಯ ಅಸ್ತ್ರಾಯ ಫಟ್
ಓಂ ಭೂರ್ಭುವಸ್ಸುವರೋಮ್
(ಪ್ರಾರಂಭಿಸುವಾಗ) ಇತಿ ದಿಗ್ಬಂಧಃ ।(ಮುಗಿಸುವಾಗ)ಇತಿ ದಿಙ್ಮುಖಃ॥

೫. ಋಷ್ಯಾದಿನ್ಯಾಸಃ

ಏತೇಷಾಂ ಮಾತೃಕಾಮಂತ್ರಾಣಾಂ ಅಂತರ್ಯಾಮೀ ಋಷಿಃ (ಶಿರಸಿ) । ಗಾಯತ್ರೀ ಛಂದಃ (ಮುಖೇ)। ಮ.ಭಾ.ಮು. ಅಜಾದಿರೂಪಿ ಶ್ರೀ ಲಕ್ಷ್ಮೀನಾರಾಯಣೋ ದೇವತಾ(ಹೃದಯೇ) ನ್ಯಾಸೇ ವಿನಿಯೋಗಃ॥ (ಮುಗಿಸುವಾಗ) ನ್ಯಾಸೋಪಸಂಹಾರೇ ವಿನಿಯೋಗಃ॥

೬. ಧ್ಯಾನಮ್

ಉದ್ಯದ್‌ಭಾಸ್ವತ್ ಸಮಾಭಾಸಶ್ ಚಿದಾನಂದೈಕ ದೇಹವಾನ್।
ಚಕ್ರಶಂಖ ಗದಾ ಪದ್ಮ–ಧರೋ ಧ್ಯೇಯೋಽಹಮೀಶ್ವರಃ॥
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ।

ಬ್ರಹ್ಮವಾಯುಶಿವಾಹೀಶ –ವಿಪ್ಯೈಃ ಶಕ್ರಾದಿಕೈರಪಿ||
ಸೇವ್ಯಮಾನೋऽಧಿಕಂ ಭಕ್ತ್ಯಾ ನಿತ್ಯನಿಶ್ಶೇಷ ಶಕ್ತಿಮಾನ್||
ಮೂರ್ತಯೋऽಷ್ಟಾವಪಿ ಧ್ಯೇಯಾನ್ — ಚಕ್ರ ಶಂಖ -ವರಾಭಯೈಃ|
ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿಕಾಃ||
ತಾದೃಗ್ರೂಪಾಶ್ಚ ಪಂಚಾಶದ್ ಜ್ಞಾನಮುದ್ರಾಭಯೋದ್ಯತಾಃ|
ಟಂಕೀ ದಂಡೀ ಚ ಧನ್ವೀ ಚ ತತ್ತದ್ಯುಕ್ತಾಸ್ತು ವಾಮತಃ||
ಓಂ ಧ್ಯಾಯೇನ್ನೃಸಿಂಹಮುರುವೃತ್ತರವಿತ್ರಿಣೇತ್ರಂ
ಜಾನುಪ್ರಸಕ್ತ ಕರಯುಗ್ಮಮಥಾಪರಾಭ್ಯಾಮ್|
ಚಕ್ರಂ ದರಂ ಚ ದಧತಂ ಪ್ರಿಯಯಾ ಸಮೇತಂ
ತಿಗ್ಮಾಂಶು ಕೋಟ್ಯಧಿಕ–ತೇಜಸಮಗ್ರ್ಯ ಶಕ್ತಿಮ್||

(ನ್ಯಾಸಾರಂಭಕ್ಕೆ ಸಂಕಲ್ಪ) ಮ.ಭಾ.ಮು. ಶ್ರೀ ಅಜಾದ ರೂಪಿ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಮ.ಭಾ.ಮು. ಶ್ರೀ ಅಜಾದಿರೂಪಿ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಮಾತೃಕಾನ್ಯಾಸಮಹಂ ಕರಿಷ್ಯೇ|

ಮಾತೃಕಾನ್ಯಾಸಾರಂಭಃ

೧. ಓಂ ಅಂ ಅಜಾಯ ನಮಃ (ಶಿರಸಿ, ತಲೆಯಲ್ಲಿ)
೨. ಓಂ ಆಂ ಆನಂದಾಯ ನಮಃ (ಬಲ ಅಂಗೈಯಿಂದ ಇಡೀ ಮುಖವನ್ನು ಮುಟ್ಟಿಕೊಳ್ಳುವುದು)
೩. ಓಂ ಇಂ ಇಂದ್ರಾಯ ನಮಃ (ಬಲಗಣ್ಣಿನಲ್ಲಿ)
೪. ಓಂ ಈಂ ಈಶಾಯ ನಮಃ (ಎಡಗಣ್ಣಿನಲ್ಲಿ)
೫. ಓಂ ಉಂ ಉಗ್ರಾಯ ನಮಃ (ಬಲಗಿವಿಯಲ್ಲಿ)
೬. ಓಂ ಊಂ ಊರ್ಜಾಯ ನಮಃ (ಎಡಗಿವಿಯಲ್ಲಿ)
೭. ಓಂ ಋಂ ಋತಂಭರಾಯ ನಮಃ (ಬಲಮೂಗಿನಲ್ಲಿ)
೮. ಓಂ ೠಂ ೠಘಾಯ ನಮಃ (ಎಡ ಮೂಗಿನಲ್ಲಿ)
೯. ಓಂ ಲುಂ ಲುಶಾಯ ನಮಃ (ಬಲಕೆನ್ನೆಯಲ್ಲಿ)
೧೦. ಓಂ ಲೂಂ ಲೂಜಯೇ ನಮಃ (ಎಡ ಕೆನ್ನೆಯಲ್ಲಿ)
೧೧. ಓಂ ಏಂ ಏಕಾತ್ಮನೇ ನಮಃ (ಮೇಲ ತುಟಿಯಲ್ಲಿ)
೧೨. ಓಂ ಐಂ ಐರಾಯ ನಮಃ (ಕೆಳ ತುಟಿಯಲ್ಲಿ)
೧೩. ಓಂ ಓಂ ಓಜೋಭೃತೇ ನಮಃ (ಮೇಲಿನ ದಂತ ಪಂಕ್ತಿಯ

೧೪. ಓಂ ಔಂ ಔರಸಾಯ ನಮಃ (ಕೆಳಗಿನ ದಂತಪಂಕ್ತಿಯಲ್ಲಿ)

೧೫. ಓಂ ಅಂ ಅಂತಾಯ ನಮಃ (ನಡುನೆತ್ತಿಯಲ್ಲಿ)

೧೬. ಓಂ ಅಃ ಅರ್ಧಗರ್ಭಾಯ ನಮಃ (ಬಾಯಲ್ಲಿ)

(೧೭ ರಿಂದ ೨೧ ರವರೆಗಿನ ಐದು ಮಂತ್ರಗಳನ್ನು ಬಲಗೈಯಿನ ನಾಲ್ಕು ಕೀಲುಗಳಲ್ಲೂ ಬೆಟ್ಟುಗಳ ತುದಿಯಲ್ಲೂ ಎಡಗೈಯಿಂದ ನ್ಯಾಸ ಮಾಡಿಕೊಳ್ಳಬೇಕು.)

೧೭. ಓಂ ಕಂ ಕಪಿಲಾಯ ನಮಃ

೧೮. ಓಂ ಖಂ ಖಪತಯೇ ನಮಃ

೧೯. ಓಂ ಗಂ ಗರುಡಾಸನಾಯ ನಮಃ

೨೦. ಓಂ ಘಂ ಘರ್ಮಾಯ ನಮಃ

೨೧. ಓಂ ಙಂ ಙಸಾರಾಯ ನಮಃ

(೨೨ ರಿಂದ ೨೬ ರವರೆಗೆ ಬಲಗೈಯಿಂದ ಎಡಗೈಯಿನ ನಾಲ್ಕು ಕೀಲುಗಳಲ್ಲೂ ಬೆಟ್ಟುಗಳ ತುದಿಯಲ್ಲೂ ನ್ಯಾಸ ಮಾಡಿಕೊಳ್ಳಬೇಕು)

೨೨. ಓಂ ಚಂ ಚಾರ್ವಂಗಾಯ ನಮಃ

೨೩. ಓಂ ಛಂ ಛಂಧೋಗಮ್ಯಾಯ ನಮಃ

೨೪ ಓಂ ಜಂ ಜನಾರ್ದನಾಯ ನಮಃ

೨೫. ಓಂ ಝಂ ಝೂಟಿತಾರಯೇ ನಮಃ

೨೬. ಓಂ ಞಂ ಞಮಾಯ ನಮಃ

(೨೭ ರಿಂದ ೩೧ ರವರೆಗೆ ಬಲಗೈಯಿಂದ ಬಲಗಾಲಿನ ನಾಲ್ಕು ಕೀಲುಗಳಲ್ಲೂ ಬೆಟ್ಟುಗಳ ತುದಿಯಲ್ಲೂ ನ್ಯಾಸ ಮಾಡಿಕೊಳ್ಳಬೇಕು.)

೨೭. ಓಂ ಟಂ ಟಂಕಿನೇ ನಮಃ

೨೮. ಓಂ ಠಂ ಠಲಕಾಯ ನಮಃ

೨೯. ಓಂ ಡಂ ಡರಕಾಯ ನಮಃ

೩೦. ಓಂ ಢಂ ಢರಿಣೇ ನಮಃ

೩೧. ಓಂ ಣಂ ಣಾತ್ಮನೇ ನಮಃ

(೩೨ ರಿಂದ ೩೬ ರವರೆಗೆ ಬಲಗೈಯಿಂದ ಎಡಗಾಲಿನ ನಾಲ್ಕು ಕೀಲುಗಳಲ್ಲೂ ಬೆಟ್ಟುಗಳ ತುದಿಯಲ್ಲೂ ನ್ಯಾಸಮಾಡಿಕೊಳ್ಳಬೇಕು)

೩೨. ಓಂ ತಂ ತಾರಾಯ ನಮಃ

೩೩. ಓಂ ಥಂ ಥಭಾಯ ನಮಃ

೩೪. ಓಂ ದಂ ದಂಡಿನೇ ನಮಃ

೩೫. ಓಂ ಧಂ ಧನ್ವಿನೇ ನಮಃ

